# ಬಹುಭಾಷಿಕ ಸಂಸ್ಕೃತಿ

ಡಾ. ರಹಮತ್ ತರೀಕೆರೆ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಬಹುಭಾಷಿಕ ಸಂಸ್ಕೃತಿ

## ಅರ್ಥವಾಗದ ಮಾತು

ಗುಲ್ಬರ್ಗಾ ಸೀಮೆಯ ಒಂದು ಜನಪದ ಕಥೆ ಸ್ವಾರಸ್ಯಕರವಾಗಿದೆ. ಹೈದರಾಬಾದ್ ನಿಜಾಮನ ಒಬ್ಬ ಅಧಿಕಾರಿಗೆ ಹಳ್ಳಿಯೊಂದಕ್ಕೆ ಹೋಗಬೇಕಾದ ತುರ್ತು ಬರುತ್ತದೆ. ಒಬ್ಬ ರೈತನಿಗೆ ಹೇಳಿ ಬಂಡಿ ಕಟ್ಟಿಸಿಕೊಂಡು ಹೊರಡುತ್ತಾನೆ. ಸಮಸ್ಯೆ ಎಂದರೆ ಅಧಿಕಾರಿಯ ಭಾಷೆ ರೈತನಿಗೆ ತಿಳಿಯದು.ರೈತನ ಭಾಷೆ ಅಧಿಕಾರಿಗೆ ತಿಳಿಯದು. ದಾರಿಯಲ್ಲಿ ಒಂದು ಊರು ಸಿಗುತ್ತದೆ."ಏ ಕೋನಸಾ ಗಾಂವರೆ" (ಇದು ಯಾವ ಊರೋ?)ಎಂದು ಅಧಿಕಾರಿ ಕೇಳುತ್ತಾನೆ. ಉರ್ದು ಬಾರದ ರೈತ 'ಏನಂದ್ರಿ?"ಎನ್ನುತ್ತಾನೆ. 'ಏನಂದ್ರಿ' ಎಂಬುದು ಊರ ಹೆಸರೇ ಇರಬಹುದೆಂದು ಅಧಿಕಾರಿ ನಂಬುತ್ತಾನೆ. ಆದರೆ 'ಪ್ರತಿ ಊರು ಬಂದಾಗ ಕೇಳಿದರೂ ಒಂದೇ ಹೆಸರನ್ನು ಹೇಳುತ್ತಾನಲ್ಲಾ' ಎಂದು ಅಧಿಕಾರಿಗೆ ಅನುಮಾನ. ಈತ ತಮಾಶೆ ಮಾಡುತ್ತಿರಬಹುದೆಂದು ರೇಗಿ ಹೊಡೆಯತೊಡಗಲು, ರೈತ ಪೆಟ್ಟು ತಾಳಲಾರದೆ "ಇಲ್ರಿಯಪ್ಪ ಇಲ್ರಿಯಪ್ಪ"ಎಂದು ಒದ್ದಾಡುತ್ತಾನೆ. ಅಧಿಕಾರಿ "ಹಾಂ! ಐಸಾ ಬೋಲ್, ಏ ಗಾಂವ್‌ಕ ನಾಂ ಇಲ್ರಿಯಪ್ಪ" (ಹಾಂ! ಹೀಗನ್ನು ಮತ್ತೆ. ಈ ಊರ ಹೆಸರು ಇಲ್ರಿಯಪ್ಪ)ಎಂದು ಹೊಡೆತ ನಿಲ್ಲಿಸುತ್ತಾನೆ. ಒಬ್ಬನಾಡುವ ಮಾತು ಮತ್ತೊಬ್ಬನಿಗೆ ತಿಳಿಯದೆ ಹೋದರೆ, ಉಂಟಾಗುವ ಸಮಸ್ಯೆಯನ್ನು ಕತೆ ನಾಟಕೀಯ ವಿನೋದದಲ್ಲಿ ಹೇಳುತ್ತಿದೆ. ಭಾಷೆಯ ಮುಖ್ಯ ಕೆಲಸವೇ ಆಡಿದ ಮಾತಿನ ಅರ್ಥವನ್ನು ಕೇಳಿದವರಿಗೆ ಮುಟ್ಟಿಸುವುದು. ಆದರೆ ಭಾಷೆಯೇ ಇಲ್ಲಿ ಅಡ್ಡಗೋಡೆಯಾಗಿದೆ. ಒಂದೇ ಭಾಷೆ ಆಡುವವರು ಒಂದೆಡೆ ವಾಸಿಸುವಾಗ ಈ ತೊಡಕು ಹುಟ್ಟುವುದಿಲ್ಲ. ಬೇರೆಬೇರೆ ಭಾಷೆ ಆಡುವವರು ಪರಸ್ಪರರ ಭಾಷೆ ಕಲಿಯದೆ ಬದುಕುವಾಗ ಇಂಥ ಅಪಾರ್ಥಗಳು ಹುಟ್ಟುತ್ತವೆ. ಕಥೆಯಲ್ಲಿ ಅಪಾರ್ಥ ಇಬ್ಬರ ನಡುವೆ ಮಾತ್ರ ಜಗಳ ತಂದಿದೆ. ಆದರೆ ವಾಸ್ತವದಲ್ಲಿ ಈ ಜಗಳ ಭಾಷಿಕ ಸಮುದಾಯಗಳ ಮಟ್ಟದಲ್ಲೂ ಜರುಗುತ್ತದೆ. ಹಲವಾರು ಭಾಷಿಕ ಸಮುದಾಯಗಳು ಒಂದೇ ಕಡೆ ಬದುಕುತ್ತಿರುವ ಭಾರತದಲ್ಲಿ, ಇಂಥ ಜಗಳಗಳಿಗೆ ಅನೇಕ ಮಗ್ಗುಲುಗಳು ಇರುತ್ತವೆ.

ಬಹುಭಾಷೆಗಳು ಇರುವ ನಾಡಿನಲ್ಲಿ ಜನ ಸಾಮಾನ್ಯವಾಗಿ ತಮ್ಮ ಭಾಷೆಯ ಜತೆಗೆ, ಪರಿಸರದಲ್ಲಿರುವ ಇತರ ಭಾಷೆಗಳನ್ನು ಕಲಿತಿರುತ್ತಾರೆ. ಹೀಗಾಗಿ ಭಾರತದಲ್ಲಿ ಜನ

ಸಹಜವಾಗಿ ಬಹುಭಾಷಿಕರು. ಬಹುಭಾಷೆಗಳನ್ನು ಕಲಿತಿರುವುದು ಸಾಮಾಜಿಕ ವ್ಯವಹಾರದಲ್ಲಿ ಮಾತ್ರ ಉಪಯುಕ್ತವಲ್ಲ. ಇದು ಸಾಂಸ್ಕೃತಿಕ ಸಿರಿವಂತಿಕೆಯನ್ನೂ ಉಂಟುಮಾಡುವಂಥದ್ದು. ತಮ್ಮ ಭಾಷೆ ಬಿಟ್ಟು ಬೇರೆ ಭಾಷೆ ಕಲಿಯದವರನ್ನು, ಭಾಷಾಶಾಸ್ತ್ರಜ್ಞರು 'ಏಕಭಾಷಿಕ ಹುಂಬರು' ಎಂದು ಕರೆಯುವುದುಂಟು. ಇಂಗ್ಲೀಶರು ತಮ್ಮ ಭಾಷೆಯನ್ನು ಜಗತ್ತಿನ ಜನರು ಕಲಿಯುವಂತೆ ಮಾಡಿದರು. ತಾವು ಮತ್ತೊಬ್ಬರ ಭಾಷೆಯನ್ನು ಕಲಿಯಲಿಲ್ಲ. ತನ್ನ ಭಾಷೆಯನ್ನು ಉಳಿದವರು ಕಲಿಯುವಂತೆ ಮಾಡುವುದು, ಯಾವತ್ತೂ ಅಧಿಕಾರಸ್ಥರ ಅಹಂಕಾರದ ಲಕ್ಷಣ. ಒಬ್ಬ ಮನುಷ್ಯ ತನ್ನ ಮನಸ್ಸಿನೊಳಗೆ ಹುಟ್ಟಿದ ಭಾವನೆ ಅಥವಾ ವಿಚಾರವನ್ನು, ಎದುರಿಗಿರುವ ಮತ್ತೊಬ್ಬ ಮನುಷ್ಯನಿಗೆ ತಲುಪಿಸಲು ಕಂಡುಕೊಂಡ ಅದ್ಭುತ ಮಾಧ್ಯಮವೆಂದರೆ ಭಾಷೆ-ಎನ್ನಲಾಗುತ್ತದೆ. ಆದರೆ ಇಂಥ ಭಾಷೆಯ ಲೋಕದಲ್ಲಿ ರಾಜಕೀಯ ಅಧಿಕಾರವೆಂಬುದು ಹಿಂದೆ ನಿಂತು ಆಡಿಸಿರುವ ಆಟಗಳು ಮತ್ತೂ ಅದ್ಭುತವಾದವು.

## ಒಟ್ಟಿಗೆ ಇರುವ ಕಷ್ಟ

ಕರ್ನಾಟಕದ ಬಹುಭಾಷಿಕ ಪರಿಸರವು ಸೃಷ್ಟಿಸಿರುವ ಸಾಂಸ್ಕೃತಿಕ ಸಿರಿವಂತಿಕೆ ಹಾಗೂ ರಾಜಕೀಯ ಕಷ್ಟಗಳು ತುಂಬ ವಿಶಿಷ್ಟವಾದವು. ಹಲವು ಭಾಷೆಗಳು ಒಟ್ಟಿಗೆ ಬದುಕುವಾಗ ಅವುಗಳ ಪದರಚನೆ, ವಾಕ್ಯರಚನೆ, ಉಚ್ಚಾರಣೆ ಹಾಗೂ ಅರ್ಥಗಳಲ್ಲಿ ಬದಲಾವಣೆಗಳಾಗುತ್ತವೆ. ಇದು ಭಾಷಾಶಾಸ್ತ್ರೀಯ ಸಂಗತಿ. ಆದರೆ ಕರ್ನಾಟಕದಲ್ಲಿ ಬಹುಭಾಷಿಕ ಪರಿಸರ (ಅದರಲ್ಲೂ ಉರ್ದು ಪ್ರವೇಶದಿಂದ) ಹೇಗೆ ಸೃಷ್ಟಿಯಾಯಿತು? ಈ ಪರಿಸರದ ಒಳಗೆ ನಡೆದ ಕೊಳುಕೊಡೆ, ಸಂಘರ್ಷಗಳು ಎಂಥವು? ಇವು ಜನರ ನಿತ್ಯ ಬದುಕಿನೊಳಗೆ ಹಾದು ಸೃಷ್ಟಿಸಿರುವ ಸಂಸ್ಕೃತಿ ಎಂಥದ್ದು? ಎಂಬ ಪ್ರಶ್ನೆಗಳನ್ನು ಪರಿಶೀಲಿಸುವುದು; ಈ ವಿಶಿಷ್ಟ ಸಂಸ್ಕೃತಿಯನ್ನು ಭಾಷೆ ಮತ ಗಡಿಗಳ ಹೆಸರಿನಲ್ಲಿ ಹುಟ್ಟುವ ಚಳುವಳಿ-ಗಲಭೆಗಳ ಹಿನ್ನೆಲೆಯಲ್ಲಿಟ್ಟು ನೋಡುವುದು, ಈ ಸರಳ ಬರೆಹದ ಉದ್ದೇಶವಾಗಿದೆ.

ಭಾಷೆಯ ಹೆಸರಲ್ಲಿ ಚಳುವಳಿ ಅಥವಾ ಗಲಭೆಗಳು ಯಾಕಾಗಿ ಹುಟ್ಟುತ್ತವೆ? ಮೇಲುನೋಟಕ್ಕೆ 'ಕೆಲವರು ನಮ್ಮ ಭಾಷೆಯನ್ನು ಕಲಿಯುತ್ತಿಲ್ಲ' ಅಥವಾ 'ನಮ್ಮ ಮೇಲೆ ನಮ್ಮದಲ್ಲದ ಭಾಷೆಯನ್ನು ಹೇರಲಾಗುತ್ತಿದೆ' ಆರೋಪಗಳು ಕೇಳಿಬರುತ್ತವೆ; 'ನಮ್ಮ ಭಾಷೆಯನ್ನು ತುಳಿಯಲಾಗುತ್ತಿದೆ' ಎಂಬ ನೋವು 'ಈ ಭಾಷೆಗೆ ಮನ್ನಣೆ ಬೇಡ' ಎಂಬ ಹಠ ಕಾಣುತ್ತವೆ. ಇಂಥಲ್ಲಿ ಅಲ್ಪಸಂಖ್ಯಾತ ಭಾಷಿಕರ ಆತ್ಮರಕ್ಷಣೆಯ ಭಾವವೋ, ಬಹುಸಂಖ್ಯಾತ ಭಾಷಿಕರ ಯಜಮಾನಿಕೆ ಧೋರಣೆಯೋ ಕೆಲಸ ಮಾಡುತ್ತಿರುತ್ತದೆ.

ವಾಸ್ತವವಾಗಿ ಈ ವಿರೋಧ - ಪ್ರತಿರೋಧಗಳಿಗೆ ಭಾಷೆ ಅಥವಾ ಮತ ನಿಜವಾದ ಕಾರಣವಲ್ಲ. ಆಯಾಭಾಷಿಕ ಸಮುದಾಯಗಳ ಆರ್ಥಿಕ-ರಾಜಕೀಯ ಬಿಕ್ಕಟ್ಟುಗಳು, ತಮ್ಮ

ಆಕ್ರೋಶಕ್ಕೆ ಭಾಷೆ ಅಥವಾ ಮತವನ್ನು ನೆಪವಾಗಿಸಿಕೊಳ್ಳುತ್ತವೆ. ಮಹಾರಾಷ್ಟ್ರದಲ್ಲಿ ಶಿವಸೇನೆಯವರು ಕನ್ನಡ ಭಾಷಿಕರ ಮೇಲೆ ದಾಳಿ ಮಾಡಿದರು. (೧೯೭೩) ಅವರ ಸೊತ್ತನ್ನು ನಾಶ ಮಾಡಿದರು. ಅದಕ್ಕೆ ಪ್ರತಿಯಾಗಿ ಕರ್ನಾಟಕದಲ್ಲೂ ಮರಾಠಿ ಭಾಷಿಕರು ಕಷ್ಟ ಅನುಭವಿಸಬೇಕಾಯಿತು. ಈಗಲೂ ಬೆಳಗಾವಿ ಭಾಗದಲ್ಲಿ ಮರಾಠಿ-ಕನ್ನಡದ ಹೆಸರಲ್ಲಿ ಪರಿಸ್ಥಿತಿ ಕಲಕುತ್ತಲೇ ಇರುತ್ತದೆ. ಕಾವೇರಿ ನೀರಿನ ಹಂಚಿಕೆ ವಿವಾದವು, (೧೯೯೧) ತಮಿಳು ಭಾಷಿಕರ ಮೇಲಿನ ಹಲ್ಲೆಗೆ ಕಾರಣವಾಯಿತು. ಇದರ ಪರಿಣಾಮವಾಗಿ ತಮಿಳುನಾಡಿನ ಗಡಿ ಜಿಲ್ಲೆಗಳ ಕನ್ನಡ ಭಾಷಿಕರು ನೋವು ಅನುಭವಿಸಬೇಕಾಯಿತು. ಹೈಸ್ಕೂಲ್ ಶಿಕ್ಷಣದಲ್ಲಿ ಮಾತೃಭಾಷೆ ಪಟ್ಟಿಯಲ್ಲಿರುವ (ಯಾರ ಮಾತೃಭಾಷೆಯೂ ಅಲ್ಲದ) ಇಂಗ್ಲೀಶು ಸಂಸ್ಕೃತಗಳ ಸ್ಥಾನವನ್ನು ಪ್ರಶ್ನಿಸುತ್ತ, ಗೋಕಾಕ್ ಚಳುವಳಿ ( ೧೯೮೦-೮೨) ಶುರುವಾಯಿತು. ಆದರೆ ಇದು ಕೊನೆ ಕೊನೆಗೆ ಉರ್ದು ವಿರೋಧದತ್ತ ತಿರುಗಿಬಿಟ್ಟಿತು. ಉರ್ದು ಭಾಷೆಯಲ್ಲಿ ವಾರ್ತೆಯನ್ನು ದೂರದರ್ಶನದಲ್ಲಿ ಪ್ರಸಾರ ಮಾಡುವ ವಿಷಯವು, (೧೯೯೪) ವಿವಾದಕ್ಕೆ ಒಳಗಾಗಿ ಭೀಕರ ಕೋಮುಗಲಭೆಗಳಾದವು. ಈಗಲೂ ಚುನಾವಣೆ ಸಮಯಗಳಲ್ಲಿ ಕೆಲವು ಸಂಘಟನೆಗಳು 'ಉರ್ದುಭಾಷೆಗೆ ಪ್ರೋತ್ಸಾಹ ನೀಡುವವರನ್ನು ಸೋಲಿಸಿ; ಸಂಸ್ಕೃತ ಗೌರವಿಸುವವರನ್ನು ಗೆಲ್ಲಿಸಿ' ಎಂಬ ಅರ್ಥದ ಭಿತ್ತಿಪತ್ರಗಳನ್ನು ಹಚ್ಚುವುದುಂಟು. ಮರಾಠಿ-ಕನ್ನಡ, ಕನ್ನಡ - ತಮಿಳು ಭಾಷಿಕರ ನಡುವಣ ಗಲಭೆಗಳಲ್ಲಿ ಮತವಿರಲಿಲ್ಲ, ಭಾಷೆ ಇತ್ತು. ಉರ್ದು-ಕನ್ನಡ ಭಾಷಿಕರ ನಡುವಣ ಗಲಭೆಗಳಲ್ಲಿ ಮತಧರ್ಮ ಸೇರಿಕೊಂಡುಬಿಟ್ಟಿತು.

ಇದು ಭಾಷೆಯಂಥ ಸಂಗತಿ ಕರ್ನಾಟಕದಲ್ಲಿ ಅಪಾರ ನೋವು ನಷ್ಟಗಳಿಗೆ ಕಾರಣವಾಗಿರುವ ಕಥೆ. ವಾಸ್ತವ ಸಂಗತಿಯೆಂದರೆ, ಭಾಷೆಯ ಹೆಸರಲ್ಲಿ ಆಕ್ರಮಣಕ್ಕೆ ಒಳಗಾಗುವವರು, ಆಕ್ರಮಣಕಾರರ ಭಾಷೆಯನ್ನು ಕಲಿತೇ ಇರುತ್ತಾರೆ. ಮಹಾರಾಷ್ಟ್ರದಲ್ಲಿರುವ ಕನ್ನಡ ಭಾಷಿಕರು ಮರಾಠಿಯನ್ನೂ ಕರ್ನಾಟಕದ ಮರಾಠಿಭಾಷಿಕರು ಕನ್ನಡವನ್ನೂ ಕಲಿತೇ ಇದ್ದಾರೆ. ಹಾಗೆಯೇ ನೀಲಗಿರಿಯ ಕನ್ನಡ ಭಾಷಿಕರು ತಮಿಳನ್ನು, ಕರ್ನಾಟಕದ ತಮಿಳು ಭಾಷಿಕರು ಕನ್ನಡವನ್ನು ಬಲ್ಲವರೇ ಆಗಿದ್ದಾರೆ. ಕರ್ನಾಟಕದಲ್ಲಿ ಉರ್ದು ಮಾತಾಡುವವರೆಲ್ಲ, ನಗರದ ಶ್ರೀಮಂತ ಮನೆತನದ ಹೆಂಗಸರನ್ನು ಬಿಟ್ಟರೆ, ಕನ್ನಡವನ್ನೂ ಬಲ್ಲವರು. ಆದರೂ ಭಾಷೆಗಳ ಹೆಸರಲ್ಲಿ ಜನ ನೋವುಣ್ಣಬೇಕಾಯಿತು. ಇದು ಸೂಚಿಸುವ ಸತ್ಯವೇನೆಂದರೆ, ಭಾಷೆ-ಮತ ನೆಪದಲ್ಲಿ 'ಆರ್ಥಿಕ-ರಾಜಕೀಯ ಯಜಮಾನಿಕೆಯನ್ನು ತಾವು ಪಡೆದುಕೊಳ್ಳಬೇಕು' ಎಂಬ ಒಂದು ವರ್ಗದ ತಹತಹ, ಭಾಷಿಕರ ನಡುವೆ ಅನುಮಾನ ದ್ವೇಷ ಕ್ಷೋಭೆಗಳನ್ನು ಸೃಷ್ಟಿಸುತ್ತದೆ. ಇದೇ ಹೊತ್ತಲ್ಲಿ ಓಟನ್ನು ಪಡೆದು ಅಧಿಕಾರಕ್ಕೆ ಬರುವ ರಾಜಕಾರಣವು ಪರಿಸ್ಥಿತಿಯನ್ನು ಬಳಸಿಕೊಳ್ಳುತ್ತದೆ.

'ಬಹುಸಂಖ್ಯಾತರ ಭಾಷೆಯನ್ನು ಕಲಿತರೆ ನಮ್ಮ ಭಾಷಾಶುದ್ಧತೆ ನಾಶವಾಗಬಹುದು.

ನಮ್ಮ ಸಾಂಸ್ಕೃತಿಕ ಗುರುತು ಅಳಿಸಿಹೋಗಬಹುದು' ಎಂಬ ಅಳುಕು ಭಾಷಿಕ ಅಲ್ಪಸಂಖ್ಯಾತರಲ್ಲಿ ಮೂಡುವುದುಂಟು. ಹಾಗೆಯೇ 'ನಮ್ಮ ಭಾಷೆಯನ್ನು ಇವರಿಗೆ ಕಲಿಸದಿದ್ದರೆ ಪ್ರತ್ಯೇಕತೆಗೆ ಕಾರಣವಾಗುತ್ತದೆ' ಎಂದು ಯೋಚಿಸುವ ಬಹುಸಂಖ್ಯಾತರು ಇದ್ದಾರೆ. ಆದರೆ ಹೀಗೆ ಯೋಚಿಸುವವರು ಅಕ್ಷರಸ್ಥರು, ಉನ್ನತ ವರ್ಗದವರು. ಸಾಮಾನ್ಯವಾಗಿ ನಗರ ಮೂಲದ ವ್ಯಾಪಾರಿ, ಉದ್ಯಮಿ ವರ್ಗದವರು. ಭಾಷೆಯ ಹೆಸರಿನ ಗಲಭೆ ನಗರಗಳಲ್ಲೇ ಶುರುವಾಗುವುದನ್ನು ಗಮನಿಸಬೇಕು. ದಿನನಿತ್ಯ ಬದುಕಿಗಾಗಿ ಹೋರಾಡುವ ವರ್ಗಗಳಿಗೆ ಇದು ಪ್ರಶ್ನೆಯೇ ಅಲ್ಲ. ಅನ್ಯ ಭಾಷೆಯ ವಿಷಯದಲ್ಲಿ ಹಿಂಜರಿಕೆ ಅಥವಾ ಆಕ್ರಮಣ ಮನೋಭಾವಗಳಲ್ಲಿ ಯೋಚಿಸುವ ಕೆಲವು ವರ್ಗಗಳ ಆಚೆ, ಬಹುಸಂಖ್ಯಾತ ಜನ ತಮ್ಮ ನಿತ್ಯ ಬದುಕಿನಲ್ಲಿ ಕಷ್ಟ ಸುಖ ಹಂಚಿಕೊಳ್ಳುತ್ತಾ, ದುಡಿಮೆ ಮಾಡುತ್ತಾ ಪರಸ್ಪರರ ಭಾಷೆಗಳಲ್ಲಿ ಒಡನಾಟ ನಡೆಸುತ್ತಿರುತ್ತಾರೆ.

## ಬಹುಭಾಷಿಕತೆ

ಒಂದು ಪ್ರದೇಶದಲ್ಲಿ ಏಕಕಾಲಕ್ಕೆ ಒಂದಕ್ಕಿಂತ ಹೆಚ್ಚು ಭಾಷೆಗಳು ಜನಬಳಕೆಯಲ್ಲಿ ಇರುವುದನ್ನು ಬಹುಭಾಷಿಕತೆ ಎನ್ನಬಹುದು. (ಎರಡು ಭಾಷೆಗಳು ಬಳಕೆಯಲ್ಲಿದ್ದರೆ ದ್ವಿಭಾಷಿಕತೆ ಎನ್ನಲಾಗುತ್ತದೆ. ಆದರೂ ಭಾರತದಲ್ಲಿರುವುದು ಬಹುಭಾಷಿಕತೆಯೇ.) ಭಾಷೆಗಳು ಬಳಕೆಯಲ್ಲಿರುವುದು ಮುಖ್ಯ. ಯಾಕೆಂದರೆ ಕೆಲವೊಮ್ಮೆ ಭಾಷೆಗಳಿರುತ್ತವೆ. ಆದರೆ ಆ ಭಾಷೆಗಳನ್ನು ಇಡಿಯಾಗಿ ನಿತ್ಯ ಜೀವನದಲ್ಲಿ ಬಳಸುವ ಸಮುದಾಯವಿರುವುದಿಲ್ಲ. ಸಂಸ್ಕೃತದಲ್ಲಿ ಪೂಜೆ- ಪಠಣ, ಅರಬ್ಬಿಯಲ್ಲಿ ಕುರಾನಿನ ಪಠಣ-ಪ್ರವಚನ, ಶಿಕ್ಷಣ ನಡೆಯುವುದುಂಟು. ಆದರೆ ಬಳಕೆಯಲ್ಲಿ ಈ ಭಾಷೆಗಳು ಕನ್ನಡದಂತೆ ಜೀವಂತವಾಗಿಲ್ಲ. ಬಹುಭಾಷಿಕ ಪರಿಸರದಲ್ಲಿ ಲಿಪಿಯುಳ್ಳ ಹಾಗೂ ಸಮೃದ್ಧ ಲಿಖಿತ ಸಾಹಿತ್ಯ ಪರಂಪರೆಯುಳ್ಳ ಭಾಷೆಗಳೇ ಇರಬೇಕೆಂದಿಲ್ಲ. ಲಿಪಿರಹಿತ ಹಾಗೂ ಲಿಖಿತಸಾಹಿತ್ಯ ಪರಂಪರೆಯಿಲ್ಲದ ಭಾಷೆಗಳೂ ಇರಬಹುದು. ತುಳು, ಕೊಡವ, ಎರವ, ಲಂಬಾಣಿ (ಗೋರ್‌ಬೋಲಿ), ಹಕ್ಕಿಪಿಕ್ಕಿ ಮುಂತಾದ ಕರ್ನಾಟಕದ ಭಾಷೆಗಳು ಕನ್ನಡದ ಜತೆ ಬದುಕುತ್ತ, ಬಹುಭಾಷಿಕ ಪರಿಸರ ನಿರ್ಮಿಸಿವೆ. ಬಹುಭಾಷಿಕತೆಯಲ್ಲಿ ಒಂದು ಭಾಷೆ ಮನೆಮಾತಾಗಿರುತ್ತದೆ. ಉಳಿದವು ಲೋಕ ವ್ಯವಹಾರಕ್ಕೆ ಇರುತ್ತವೆ.

ಕನ್ನಡದ ಜತೆ ಇರುವ ತೆಲುಗು, ತಮಿಳು, ಮರಾಠಿ, ಮಲೆಯಾಳಂ, ಕೊಂಕಣಿಗಳು ಕರ್ನಾಟಕದ ಅಕ್ಕಪಕ್ಕ ಇರುವ ರಾಜ್ಯಗಳ ಭಾಷೆಗಳು. ಇವು ಗಡಿನಾಡಿನಲ್ಲೂ ಒಳನಾಡಿನಲ್ಲೂ ಬಹುಭಾಷಿಕತೆಗೆ ಕಾರಣವಾಗಿವೆ. ಉರ್ದು, ಕೊಡವ, ತುಳು, ಲಂಬಾಣಿ, ಅರೆಭಾಷೆ, ಬ್ಯಾರಿ -ಇತ್ಯಾದಿ ಮನೆಮಾತುಗಳು ಬೇರೆಬೇರೆ ಕಡೆ ಬಹುಭಾಷಿಕ ವಾತಾವರಣ ನಿರ್ಮಿಸಿವೆ. ತ್ರಿಭಾಷಾ

ಶಿಕ್ಷಣ ನೀತಿಯ ಕಾರಣದಿಂದ ಶಾಲೆಗಳಲ್ಲಿ ಇಂಗ್ಲೀಶು ಹಿಂದಿ ಕಲಿಸಲಾಗುತ್ತಿದೆ. ಜತೆಗೆ ಇವು ಕರ್ನಾಟಕದಲ್ಲಿ ಬೇರೆ ಕಾರಣಗಳಿಗಾಗಿಯೂ ಬಳಕೆಯಲ್ಲಿದ್ದು ಬಹುಭಾಷಿಕ ಪರಿಸರ ನಿರ್ಮಿಸಿವೆ. ಅದರಲ್ಲೂ ಅಕ್ಷರಸ್ಥರು ಉತ್ತರಭಾರತದ ಯಾವುದೇ ಭಾಷಿಕರ ಜತೆ ಹಿಂದಿಯಲ್ಲೂ, ಯಾವುದೇ ವಿದೇಶೀಯರೊಂದಿಗೆ ಇಂಗ್ಲೀಶಲ್ಲೂ ಸಂವಾದಿಸುತ್ತಾರೆ. ಭಾರತದ ಅನೇಕ ಕಡೆಗಳಿಂದ ಜನ ವಲಸೆ ಬಂದು ವಾಸಿಸುವಲ್ಲಿ ಕೂಡ ಬಹುಭಾಷಿಕತೆ ಇದೆ. ಉದಾ: ಕರ್ನಾಟಕದಲ್ಲಿ ಮಾರ್ವಾಡಿಗಳು ಸಿಖ್ಖರು ಇದ್ದಾರೆ. ಸಿಂಧನೂರಿನ ಬಳಿ ಬಾಂಗ್ಲಾ ನಿರಾಶ್ರಿತರು, ಮುಂಡಗೋಡು ಕುಶಾಲನಗರಗಳ ಬಳಿ ಟಿಬೆಟ್ಟಿನ ನಿರಾಶ್ರಿತರು ಇದ್ದಾರೆ. ಇವರ ಭಾಷೆಗಳು ಕನ್ನಡದ ಮೇಲೆ ತೆಲುಗು, ಉರ್ದು, ತಮಿಳು ಪ್ರಭಾವ ಉಂಟುಮಾಡುವಂತೆ ಮಾಡಲಾರವು. ಬದಲಿಗೆ ಕನ್ನಡ ಪ್ರಭಾವದ ಒತ್ತಡ ಇವರ ಭಾಷೆಗಳ ಮೇಲೆ ಸಹಜವಾಗಿರುತ್ತದೆ.

ಕನ್ನಡವು 'ಬಹುಸಂಖ್ಯಾತರ ಭಾಷೆ' 'ರಾಜ್ಯಭಾಷೆ' ಎಂದಾಗಲೂ ಅದರಲ್ಲಿ ಎಷ್ಟೊಂದು ಆಡುರೂಪಗಳಿವೆ? ಚಾಮರಾಜನಗರ, ಬೀದರ್, ಕುಂದಾಪುರ, ಅಥಣಿ, ಸಿರ್ಸಿಗಳ ಆಡು ರೂಪಗಳನ್ನು ಕೇಳಿಸಿಕೊಂಡರೆ, ಇವು ಬೇರೆ ಭಾಷೆಗಳೇನೂ ಎಂಬ ಅನುಭವವಾಗುತ್ತದೆ. ಅದರಲ್ಲೂ ಕಾಡು ಮೂಲೆಗಳಲ್ಲಿ ವಾಸಿಸುವ ಸೋಲಿಗ, ಹಾಲಕ್ಕಿ, ಜೇನುಕುರುಬ, ಇರುಳಿಗ ಮೊದಲಾದ ಬುಡಕಟ್ಟಿನವರ ಕನ್ನಡಗಳು ಇನ್ನೂ ಭಿನ್ನ. ಕರ್ನಾಟಕದ ತುಂಬ ಕನ್ನಡ ಎಂಬ 'ಒಂದು' ಭಾಷೆಯಿದೆ ಎಂಬ ಗ್ರಹಿಕೆ ಎಷ್ಟೊಂದು ಸುಳ್ಳು!

ಈ ಮಾತು ಇಡೀ ದೇಶಕ್ಕೇ ಅನ್ವಯವಾಗುತ್ತದೆ. ಸಂವಿಧಾನ ಮಾನ್ಯ ಮಾಡಿರುವ ಭಾಷೆಗಳು ೧೮ ಇರಬಹುದು. ರಾಷ್ಟ್ರಭಾಷೆಯ ಗತ್ತಿನಲ್ಲಿ ಹಿಂದಿ ಇರಬಹುದು. ಆದರೆ ವಾಸ್ತವ ಬೇರೆಯಿದೆ. ಭಾರತದಲ್ಲಿ ೧೬೫೨ರಷ್ಟು ಮನೆಮಾತುಗಳಿದ್ದು, ಅವು ತಮ್ಮದೇ ಆದ ಸಾಂಸ್ಕೃತಿಕ ಲೋಕಗಳನ್ನು ನಿರ್ಮಿಸಿಕೊಂಡಿವೆ. ಈ ಭಾಷಿಕರು ಪರಿಸರದ ಭಾಷೆಗಳನ್ನು ಸಾಮಾನ್ಯವಾಗಿ ಬಲ್ಲವರು. ಅಂದರೆ ಬಹುಭಾಷಿಕರು.

ಕರ್ನಾಟಕದಲ್ಲಿ ಮಂಗಳೂರು ಮತ್ತು ಗುಲಬರ್ಗಾಗಳಂತೂ ತುಂಬ ವಿಶಿಷ್ಟವಾದ ಬಹುಭಾಷಿಕ ಪ್ರದೇಶಗಳು. ಮಂಗಳೂರು ಪ್ರದೇಶದ ಮುಖ್ಯ ಭಾಷೆ ತುಳು. ರಾಜ್ಯಭಾಷೆಯಾಗಿ ಕನ್ನಡವಿದೆ. ಕೇರಳಗಡಿಯಾಗಿ ಮಲೆಯಾಳವಿದೆ. ಮಲೆಯಾಳ ಮೂಲದ ಮಾಪ್ಪಾ ಹಾಗೂ ಬ್ಯಾರಿ (ಬ್ಯಾರಿ ಭಾಷೆಯಲ್ಲಿ ತುಳು ಕನ್ನಡ ಮಿಶ್ರಣ ಹೆಚ್ಚು) ಭಾಷೆಗಳಿವೆ. ಪೋರ್ಚುಗೀಸರ ಕಾಲದಲ್ಲಿಗೋವೆಯಿಂದ ಬಂದು ನೆಲೆಸಿದ ಕೊಂಕಣಿಗಳಿದ್ದಾರೆ. ಜತೆಗೆ ಪೇಶ್ವೆಗಳ ಕಾಲದಲ್ಲಿ ಬಂದ ಮರಾಠಿಗರೂ, ಟಿಪ್ಪುಕಾಲದಲ್ಲಿ ಬಂದಿರಬಹುದಾದ ಉರ್ದು ಭಾಷಿಕರೂ ಇದ್ದಾರೆ. ತುಳು, ಕೊಂಕಣಿ, ಮಾಪ್ಪಾ, ಬ್ಯಾರಿಗಳು ಲಿಪಿರಹಿತ ಭಾಷೆಗಳಾದರೂ, ಅಪಾರ ಮೌಖಿಕ ಸಾಹಿತ್ಯ ಪರಂಪರೆಯನ್ನು ಪಡೆದಿವೆ.ಇನ್ನು ಗುಲಬರ್ಗೆಯ ಮುಖ್ಯಭಾಷೆ ಕನ್ನಡ ಮತ್ತು

ಉರ್ದು. ಆಂಧ್ರ-ಮಹಾರಾಷ್ಟ್ರಗಳು ಬಗಲಲ್ಲಿರುವುದರರಿಂದ ತೆಲುಗು-ಮರಾಠಿಗಳಿವೆ. ಹಿಂದಿಯೂ ಇದೆ. ಈ ಐದೂ ಭಾಷೆಗಳು ಕೋಟ್ಯಂತರ ಜನರಾಡುವ ಭಾರತೀಯ ಭಾಷೆಗಳು; ಹಲವಾರು ಶತಮಾನಗಳ ಲಿಖಿತ ಸಾಹಿತ್ಯಪರಂಪರೆ ಪಡೆದಂಥವು. ಈ ೫ ಭಾಷೆಗಳಲ್ಲಿ ೩ ಭಾಷೆಗಳನ್ನು ಬಲ್ಲವರಷ್ಟೇ ಅಲ್ಲ, ಇವುಗಳಲ್ಲಿ ಏಕಕಾಲಕ್ಕೆ ಸಾಹಿತ್ಯ ರಚನೆ ಮಾಡುವ ಲೇಖಕರೂ ಇಲ್ಲಿದ್ದಾರೆ. ಈ ಬಹುಭಾಷಿಕ ಕವಿತ್ವ ಸಂಪ್ರದಾಯಕ್ಕೆ ೩೦೦ ವರ್ಷಗಳ ಚರಿತ್ರೆಯಿದೆ. ಸಾಮಾನ್ಯ ಜನ ಕೂಡ ಉರ್ದು, ತೆಲುಗು, ಕನ್ನಡ, ಮರಾಠಿಗಳನ್ನು ಬೇರೆ ಬೇರೆ ಲೌಕಿಕ, ಧಾರ್ಮಿಕ ಉದ್ದೇಶಗಳಿಗೆ ನಿತ್ಯಬದುಕಿನಲ್ಲಿ ಬಳಸುವ ವಿಚಿತ್ರ ಪರಿಸ್ಥಿತಿ ಇಲ್ಲಿದೆ.

## ಬಹುಭಾಷಿಕ ಪರಿಸರ ಮತ್ತು ಉರ್ದು

ಒಂದೇ ಪ್ರದೇಶದ ಜನ ಏಕಕಾಲಕ್ಕೆ ಹಲವಾರು ಭಾಷೆಗಳನ್ನು ಹಲವು ಉದ್ದೇಶಗಳಲ್ಲಿ ಬಳಸುವ ಈ ಪರಿಸ್ಥಿತಿ 'ವಿಚಿತ್ರ' ಅನಿಸುತ್ತದೆ. ಆದರೆ ಇದು ವಾಸ್ತವ. ಈ 'ವಾಸ್ತವ' ಉಂಟಾಗಲು ಚಾರಿತ್ರಿಕ ಕಾರಣಗಳಿವೆ. ವಿಭಿನ್ನ ಭಾಷಿಕ ಸಮುದಾಯಗಳ ಅಂಚಿನಲ್ಲಿರುವುದು ಒಂದು ಕಾರಣ. ಬೇರೆ ಬೇರೆ ಆಳುವ ಪ್ರಭುತ್ವಗಳು ಬಂದಾಗಲೆಲ್ಲ ಒಂದೊಂದು ಭಾಷೆಯ ಆಡಳಿತ ಮಾಡಿರುವುದು ಇನ್ನೊಂದು ಕಾರಣ. ಬಹಮನಿಗಳ ಕಾಲದಲ್ಲಿ ಫಾರಸಿ, ಆದಿಲಶಾಹಿಗಳ ಕಾಲದಲ್ಲಿ ಮರಾಠಿ ಮತ್ತು ದಖನಿ, ನಿಜಾಮರ ಕಾಲದಲ್ಲಿ ಉರ್ದು, ಗುಲಬರ್ಗಾ ಸೀಮೆಯ ಆಡಳಿತ ಭಾಷೆಗಳಾಗಿದ್ದವು. ಕಳೆದ ೫೦ ವರುಷಗಳಿಂದ ಈಚೆಗೆ ಇಂಗ್ಲೀಶು ಕನ್ನಡ ಆಡಳಿತ ಭಾಷೆಗಳಾಗಿವೆ. ಶಿಕ್ಷಣ, ಟಿವಿ, ಸಿನಿಮಾ ಕಾರಣಗಳಿಂದಲೂ ಇಂಗ್ಲೀಶು ಹಿಂದಿಗಳು ಇವೆ. ನಿಜವಾಗಿಯೂ ಇಲ್ಲಿನ ಬಹುಭಾಷಿಕ ಸಂಸಾರದಲ್ಲಿ ಉರ್ದುವಿನ ಸೇರ್ಪಡೆ ವಿಶಿಷ್ಟವಾದುದು. ಯಾಕೆಂದರೆ ಇದು ವಲಸೆ ಬರಲಿಲ್ಲ. ಮೊದಲಿಂದಲೂ ಇರಲಿಲ್ಲ. ಇದ್ದುದರ ಜತೆ ಬಂದದ್ದು ಕೂಡಿ, ಹೊಸತಾಗಿ ಹುಟ್ಟಿದ್ದು. ಅದರ ಗರ್ಭಧಾರಣೆ ಸೂಲ ಬಾಲ್ಯ ಬೆಳವಣಿಗೆಗೆಲ್ಲ ಹೊಟ್ಟೆ, ತೊಟ್ಟಿಲು, ಬೀದಿಯಾಗಿದ್ದು ಗುಲಬರ್ಗಾ ಬಿಜಾಪುರಗಳ ಪರಿಸರವೇ!

ಭಾರತದ ಕಿರಿವಯಸ್ಸಿನ ಭಾಷೆಗಳಲ್ಲಿ ಉರ್ದು ಒಂದು; ಇದನ್ನು ಮುಸ್ಲಿಮರ ಭಾಷೆ ಎಂದು ಸಾಮಾನ್ಯವಾಗಿ ತಿಳಿಯಲಾಗಿದೆ. ಭಾಷೆಗೂ ಮತಕ್ಕೂ ನೇರ ಸಂಬಂಧವಿರಬೇಕಾಗಿಲ್ಲ. ಕರ್ನಾಟಕದ ಕಲಾಲರ (ಮಾಂಸ ಮಾರುವ ವೃತ್ತಿಯವರ) ಮನೆ ಮಾತು ಉರ್ದು. ಇಸ್ಲಾಮಿ ದೇಶವಾದರೂ ಬಾಂಗ್ಲಾದೇಶದಲ್ಲಿ ಉರ್ದು ಇಲ್ಲ. ಕೇರಳ ತಮಿಳುನಾಡು ಮುಸ್ಲಿಮರ ಮನೆಮಾತು ಉರ್ದುವಲ್ಲ. ಕರ್ನಾಟಕದ ಮುಸ್ಲಿಂ ಪಂಗಡಗಳಾದ ಮಾಪ್ಲಾ, ಬ್ಯಾರಿ, ನವಾಯತ, ಪಿಂಜಾರರ ಮನೆಮಾತೂ ಉರ್ದುವಲ್ಲ. ಆದರೂ ಭಾರತದ ಬಹುತೇಕ ಮುಸ್ಲಿಮರ ಮನೆಮಾತು ಉರ್ದು; ಉತ್ತರಪ್ರದೇಶ, ಬಿಹಾರ, ಆಂಧ್ರ, ಮಹಾರಾಷ್ಟ್ರ, ಕರ್ನಾಟಕಗಳಲ್ಲಿ ಹೆಚ್ಚಿನ ಉರ್ದುಭಾಷಿಕರು ಇದ್ದಾರೆ.

೧೩ನೇ ಶತಮಾನದಲ್ಲಿ ಅಲ್ಲಾವುದ್ದೀನ ಖಿಲಜಿಯು ದಕ್ಷಿಣಭಾರತಕ್ಕೆ ರಾಜ್ಯವಿಸ್ತರಣೆಗಾಗಿ ಸೈನ್ಯ ಕಳಿಸಿದ್ದನಷ್ಟೆ. ಈ ಸೈನ್ಯದ ಜತೆ ಒಮ್ಮೆ (೧೩೧೧ರಲ್ಲಿ) ಫಾರಸಿಯ ಖ್ಯಾತ ಕವಿ ಅಮೀರ್ ಖುಸ್ರೂ ಕರ್ನಾಟಕಕ್ಕೆ ಬಂದಿದ್ದ. ಆತ 'ಧೂರಸಮುಂಧರರ್' (ಹಳೇಬೀಡು)ನಲ್ಲಿ ಆದ ತನ್ನ ಅನುಭವವನ್ನು ಬರೆಯುತ್ತಾ 'ಹೊಯ್ಸಳರಾಜ್ಯದಲ್ಲಿ ೨೦೦೦೦ ಮುಸ್ಲಿಂ ಸೈನಿಕರಿದ್ದರು, ಯಾರಿಗೂ ಫಾರಸಿ ಬರುತ್ತಿರಲಿಲ್ಲ' ಎನ್ನುತ್ತಾನೆ. ಇದು ಸೂಚಿಸುವ ಸಂಗತಿಯೆಂದರೆ - ಕರ್ನಾಟಕದಲ್ಲೂ ಮುಸ್ಲಿಮರಿದ್ದರು. ಆದರೆ ಅವರಿಗೆ ತಮ್ಮದೇ ಆದ ಭಾಷೆಯೊಂದು ಇನ್ನೂ ಇರಲಿಲ್ಲ. ಬಹುಶಃ ಕನ್ನಡ ಅವರ ಭಾಷೆಯಾಗಿತ್ತು. ತುಘಲಕನು ರಾಜಧಾನಿಯನ್ನು ದಿಲ್ಲಿಯಿಂದ ದೌಲತಾಬಾದಿಗೆ ವರ್ಗಾಯಿಸಿದಾಗಲೂ (೧೩೨೬) ಉರ್ದು ಹುಟ್ಟಿರಲಿಲ್ಲ. ಅದು ಹುಟ್ಟಿದ್ದು, ದೆಹಲಿ ದೊರೆಗಳ ವಿರುದ್ಧ ಅವರ ದಖನ್ ರಾಯಭಾರಿಗಳು ಬಂಡೆದ್ದು ಸ್ವತಂತ್ರರಾಗುವ ಪ್ರಕ್ರಿಯೆಯಲ್ಲಿ; ಹಸನಗಂಗೂ ಬಹಮನಿಯು ಗುಲಬರ್ಗಾದಲ್ಲಿ ರಾಜ್ಯ ಸ್ಥಾಪನೆ (೧೩೪೭) ಮಾಡಿದ ಬಳಿಕ; ಹೊಸ ರಾಜಕೀಯ ಪರಿಸ್ಥಿತಿಯು, ಹೊಸಭಾಷೆಯ ಹುಟ್ಟಿಗೆ ಚರಿತ್ರೆಯ ಹೊಲವನ್ನು ಹದಮಾಡತೊಡಗಿತು.

ಅದು ಹೇಗೆಂದರೆ - ದೆಹಲಿಯನ್ನಾಳಿದ ಖಿಲಜಿಗಳು ಮೊಗಲರು ಯಾವತ್ತೂ ಫಾರಸಿಯನ್ನೇ ಆಡಳಿತ ಭಾಷೆಯನ್ನಾಗಿ ಮಾಡಿಕೊಂಡಿದ್ದವರು. ಯಾವಾಗ ದೆಹಲಿಯಿಂದ ದೂರವಾಗಿ, ಅದಕ್ಕೆ ವಿರುದ್ಧವಾಗಿ ಒಂದು ಸ್ವತಂತ್ರ ರಾಜಪ್ರಭುತ್ವ ರೂಪುಗೊಳ್ಳ ತೊಡಗಿತೋ, ಆಗ ಅಲ್ಲಿನ ಸ್ಥಳಿಯ ಭಾಷೆಗಳ ಜತೆ ಫಾರಸಿ ತುರ್ಕಿ ಅರಬಿಗಳು ಬೆರೆಯತೊಡಗಿದವು. ಅಂದರೆ ಮರಾಠಿ, ತೆಲುಗು, ಕನ್ನಡಗಳ ಜತೆ ಇವು ಬಾಳ್ವೆ ಮಾಡಬೇಕಾಯಿತು. ಮುಂದೆ ಬಹಮನಿ ರಾಜ್ಯ ಒಡೆದು (೧೪೯೦) ಬಿಜಾಪುರ (ಆದಿಲಶಾಹಿ) ಬೀದರ್ (ಬರೀದಶಾಹಿ) ಗೋಲಕೊಂಡ(ಕುತುಬ್‌ಶಾಹಿ) ಅಹಮದ್‌ನಗರ (ನಿಜಾಂಶಾಹಿ) ಬಿರಾರ್ (ಇಮದ್‌ಶಾಹಿ) ಎಂದು ೫ ರಾಜ್ಯಗಳಾದ ಮೇಲೆ, ಈ ಭಾಷಾ ಬೆರಕೆ ಮತ್ತಷ್ಟು ಹೆಚ್ಚಾಯಿತು. ಮುಖ್ಯವಾಗಿ ಫಾರಸಿ ಮಾತಾಡುವ ಅಧಿಕಾರಿಗಳು ವ್ಯಾಪಾರಿಗಳು ಸಂತರು ಮಿಶನರಿಗಳು ಸ್ಥಳೀಯ ಜನ ಸಮುದಾಯಗಳ ಜತೆ, ನಿತ್ಯ ಸಂಪರ್ಕಕ್ಕಾಗಿ ಅವರ ಭಾಷೆಯನ್ನು ಬಳಸಬೇಕಾದ ಅನಿವಾರ್ಯತೆ ಬಂತು. ಹಾಗೆಯೇ ಆಡಳಿತದ ಜತೆ ತಮ್ಮ ವ್ಯವಹಾರಗಳಿಗೆ ಸ್ಥಳೀಕ ಜನ, ಪ್ರಭುತ್ವದ ಭಾಷೆಯನ್ನು ಕಲಿಯತೊಡಗಿದರು. ಈ ಭಾಷಾಬೆರಕೆ ಹೆಚ್ಚಾಗಿ ಸೈನಿಕಪಾಳೆಯಗಳಲ್ಲಿ, ಬಜಾರುಗಳಲ್ಲಿ ನಡೆಯಿತು. (ಉರ್ದು ಎಂದರೆ ಸೈನಿಕಶಿಬಿರ ಎಂಬರ್ಥವಿದೆ.) ಎರಡೂ ಕಡೆಯವರು ಪರಸ್ಪರರಿಗೆ ಅರ್ಥವಾಗುವಂಥ ಹೊಸ ಸಂಪರ್ಕಭಾಷೆ ಒಂದನ್ನು ಹುಟ್ಟಿಸ ತೊಡಗಿದರು. ಅದುವೇ ಈಗಿರುವ ಉರ್ದುವಿನ ಮೂಲ ರೂಪವಾದ ದಖನಿಯಾಗಿತ್ತು.

ಅದೊಂದು ಮಹಾಬೆರಕೆಗಳ ಕಾಲ. ಭಾಷೆಗಳು ಮಾತ್ರ ಬೆರೆಯುತ್ತಿರಲಿಲ್ಲ. ಧರ್ಮಗಳು, ಸಂಸ್ಕೃತಿಗಳು, ನಂಬಿಕೆ-ಆಚರಣೆಗಳು, ಸಾಹಿತ್ಯಗಳು ಬೆರೆಯುತ್ತಿದ್ದವು. ಬಿಜಾಪುರದಲ್ಲಿ ೨ನೇ

ಇಬ್ರಾಹಿಂ ಆದಿಲಶಾಹಿಯೂ ಅತ್ತ ದಿಲ್ಲಿಯಲ್ಲಿ ಅಕ್ಬರನೂ ಈ ಬೆರೆಯುವಿಕೆಗೆ ಉತ್ತೇಜನ ನೀಡಿದರು. ತುರ್ಕಿ ಫಾರಸಿಗಳು ದೆಹಲಿ ಸುತ್ತಮುತ್ತಲ ಜನಭಾಷೆಗಳ ಜತೆ ಬೆರೆತು 'ಹಿಂದವಿ' ರೂಪುತಳೆಯಿತು. ಈ ಹಿಂದವಿಯೇ ಮುಂದೆ ದೇವನಾಗರಿಲಿಪಿ ಬಳಸಿಕೊಂಡು ಸಂಸ್ಕೃತ ಮಯವಾಗಿ ಹಿಂದಿಯಾಯಿತು; ಫಾರಸಿಲಿಪಿ ಬಳಸಿಕೊಂಡು, ಫಾರಸೀ ಶಬ್ದ ಕೋಶಪಡೆದು ಉತ್ತರ ಭಾರತದ ಉರ್ದುವಾಯಿತು. ಈ ಎರಡೂ ಭಾಷೆಗಳ ಮೂಲಭೂತ ವ್ಯಾಕರಣ ಒಂದೇ. ಇಂಥದೇ ಬೆರಕೆಯ ಪ್ರಕ್ರಿಯೆಯಲ್ಲಿ ದಕ್ಷಿಣದಲ್ಲಿ ಹುಟ್ಟಿದ ಭಾಷೆಗೆ ದಖನಿ ಎನ್ನಲಾಯಿತು.

ಮೊದಮೊದಲು ದಖನಿ ಅಥವಾ ಹಿಂದವಿಗಳನ್ನು, ಪ್ರತಿಷ್ಠಿತ ಭಾಷೆಯಾಗಿದ್ದ ಫಾರಸಿ ಬಳಸುತ್ತಿದ್ದವರು ಕೀಳಾಗಿ ನೋಡುತ್ತಿದ್ದರು. ರೇಖ್ತಾ (ಕಲಬೆರಕೆಭಾಷೆ) ಎಂದು ಜರೆಯುತ್ತಿದ್ದರು. ಆಡಳಿತಗಾರರು ಆಸ್ಥಾನಗಳಲ್ಲಿ ಇವನ್ನು ಬಿಟ್ಟುಕೊಳ್ಳಲಿಲ್ಲ. ಕವಿಗಳು ಸಾಹಿತ್ಯದಲ್ಲಿ ಬಳಸಲಿಲ್ಲ. ಆದರೆ ಸಮುದಾಯಗಳು ಈ ಭಾಷೆಗಳನ್ನು ಬಳಸುತ್ತ, ಬೀದಿಯ ಕೂಸಿನಂತೆ ಬೆಳೆಸುತ್ತ ಹೋದರು. ಶಿಥಿಲರೂಪದಲ್ಲಿ ಇದ್ದ ದಖನಿಯನ್ನು ಮೊದಲಬಾರಿಗೆ, ಸಾಹಿತ್ಯ ರಚನೆಯಲ್ಲಿ ಬಳಸಿದವರು ದಕ್ಷಿಣದ ಸೂಫೀಸಂತರು. ಗುಲಬರ್ಗೆಯ ಖಾಜಾ ಬಂದೇ ನವಾಜನು (೧೩೧೪ - ೧೪೨೨) ದಖನಿಯಲ್ಲಿ ಕೃತಿರಚಿಸಿದನು. ದಖನಿಯ ಮೊದಲ ಕವಿಯೆಂದು ಹೆಸರಾಗಿರುವ ಔರಂಗಾಬಾದಿನ ವಲಿ (೧೬೬೮-೧೭೪೧) ಈ ಭಾಷೆಯಲ್ಲಿ ಕವಿತ್ವ ಮಾಡಬಹುದು ಎಂದು ದಿಲ್ಲಿಯವರಿಗೆ ತೋರಿಸಿದನು. ದಖನಿಯನ್ನು ದರಬಾರಿನೊಳಗೆ ಮೊದಲು ಬಿಟ್ಟುಕೊಂಡವರು ಬಿಜಾಪುರದ ಆದಿಲಶಾಹಿಗಳು. ಅದರಲ್ಲೂ ೧ನೇ ಇಬ್ರಾಹಿಂ (೧೫೩೮-೫೭); ಅನಂತರ ಕರ್ನಾಟಕದ ಅನೇಕ ಪ್ರತಿಭಾವಂತ ಕವಿಗಳು ಈ ಭಾಷೆಯಲ್ಲಿ ಸಾಹಿತ್ಯರಚನೆ ಮಾಡಿದರು. ಅವರಲ್ಲಿ ಶಾಮಿರಾಂಜಿ (೧೫೭೩) ಅಬ್ದುಲ್ಲಾ ದೆಹಲವಿ (೧೬೦೦) ಸಲನತಿ (೧೬೪೭) ಮುಲ್ಲಾನುಸ್ರತಿ (೧೬೭೬) ಮಹಮದ್ ಬಹ್ರಿ (೧೬೮೬) ಜಸವಂತರಾಯ ಮುನಶಿ (೧೬೮೭) ಮುಂತಾದವರು. ಸ್ವತಃ ದೊರೆ ೨ನೇ ಇಬ್ರಾಹಿಂ ಆದಿಲಶಾಹಿ (೧೫೮೦-೧೬೨೬) ದಖನಿಯಲ್ಲಿ 'ಕಿತಾಬೆ ನೌರಸ್' ಕೃತಿ ರಚಿಸಿದನು. ಇದೇ ಕಾಲದಲ್ಲಿ ಗೋಲಕೊಂಡದ ಮಹಮದ್ ಕುಲಿಕುತುಬ್‌ಶಾಹ ದಖನಿಯಲ್ಲಿ ಕವಿತ್ವ ಮಾಡಿದನು.

ದಖನಿ ಈಗ ಯಾರೂ ಕಡೆಗಣಿಸಲಾಗದ ಭಾಷೆಯಾಗಿ ಬೆಳೆಯಿತು. ಇದನ್ನು ರಾಜರು ಆಡಳಿತದಲ್ಲಿ ಹಾಗೂ ಸೂಫಿಸಂತರು- ಕವಿಗಳು ತಮ್ಮ ರಚನೆಗಳಲ್ಲಿ ಬಳಸತೊಡಗಿದರು. ಇದಕ್ಕೆ ಪ್ರತಿಯೊಬ್ಬರಿಗೂ ಅವರದೇ ಆದ ಕಾರಣ ಇದ್ದವು. ಮೊದಲನೆಯದಾಗಿ ಈ ಹೊಸಭಾಷೆ ಬಹುಸಂಖ್ಯಾತ ಜನರಿಗೆ ಪ್ರಿಯವಾದ ಮತ್ತು ತಿಳಿಯುವ ಭಾಷೆಯಾಗಿತ್ತು. ಎರಡನೆಯದಾಗಿ ತಮಗೆ ರಾಜಕೀಯವಾಗಿ ವಿರೋಧಿಯಾಗಿದ್ದ ದೆಹಲಿಯ ಫಾರಸಿ ಭಾಷಿಕ

ಸಾಮ್ರಾಟರ ಹಿಡಿತದಿಂದ ಪಾರಾಗಿ, ಸ್ವಾಯತ್ತತೆಯನ್ನು ಪಡೆಯುವುದಕ್ಕೆ ಪೂರಕವಾಗಿತ್ತು. ಫಾರಸಿ ಬಿಡುತ್ತ ದಖನಿ ಬಳಸುತ್ತ ಹೋಗುವ ಈ ಕ್ರಿಯೆ, ಏಕಕಾಲಕ್ಕೆ ಸ್ಥಳೀಯ ಜನರಿಗೆ ಬದ್ಧವಾಗುವ ಹಾಗೂ ರಾಜಕೀಯ ಸ್ವಾಯತ್ತತೆ ಪಡೆಯುವ ಒಳ ಉದ್ದೇಶಗಳನ್ನು ಈಡೇರಿಸಿತು. ಔರಂಗಜೇಬನು ಬಿಜಾಪುರ-ಗೋಲಕೊಂಡ ರಾಜ್ಯಗಳನ್ನು ಪತನಮಾಡಿದ ನಂತರ, ದಖನಿಯನ್ನು ರಾಜಾಶ್ರಯದಲ್ಲಿ ಬೆಳೆಸುವ ಕೇಂದ್ರ ಔರಂಗಾಬಾದಿಗೆ ಹೋಯಿತು. ಆದರೆ ಕರ್ನಾಟಕದ ಸಮುದಾಯಗಳು, ಕವಿಗಳು, ಸಂತರು, ಮುಂದೆ ಬಂದ ಅನೇಕ ಸಣ್ಣಪುಟ್ಟ ಸಂಸ್ಥಾನಗಳು, ಇದರ ಕೈಬಿಡಲಿಲ್ಲ. ಕರ್ನಾಟಕದ ನೆಲದ ಮೇಲೆ ೫ ಶತಮಾನಗಳ ಕಾಲ ನಡೆದ ಈ ರಾಜಕೀಯ-ಧಾರ್ಮಿಕ-ಸಾಮಾಜಿಕ ಪರಿಸ್ಥಿತಿಗಳು ಸೇರಿ ಹಡೆದ ದಖನಿ ಉರ್ದುವೇ, ಈಹೊತ್ತಿನ ಕರ್ನಾಟಕದ ಬಹುಭಾಷಿಕತೆಗೆ ಒಂದು ಕಾರಣವಾಗಿರುವುದು ಚಾರಿತ್ರಿಕ ಮಹತ್ವದ ಮಾತಾಗಿದೆ.

## ಉರ್ದು ಸೃಷ್ಟಿಸಿದ ಕ್ಷೋಭೆ

ಆದರೆ ಮತದ ಹೆಸರಿನಲ್ಲಿ ದೇಶದ ವಿಭಜನೆಯಾಗಿ, ಪಾಕಿಸ್ತಾನವೆಂಬುದು ಹುಟ್ಟಿ, ಉರ್ದು ಅದರ ರಾಷ್ಟ್ರಭಾಷೆಯಾದ ಬಳಿಕ (೧೯೪೭), ಭಾರತದಲ್ಲಿ ಉರ್ದುವಿನ ವಿಧಿಯೇ ಬದಲಾಗತೊಡಗಿತು. ಜನ ತಮ್ಮ ಮತ ಸಂಸ್ಕೃತಿ ಮೀರಿ ಬೆರೆತು ಹುಟ್ಟಿಸಿದ ಭಾಷೆ, ಜನರನ್ನು ಬೆರೆಸಲು ಬಳಕೆಯಾದ ಭಾಷೆ, ಈಗ ಜನರನ್ನು ಬೇರೆಯಾಗಿಸಲು ಬಳಕೆಯಾಗತೊಡಗಿತು. ಸಾಂಸ್ಕೃತಿಕ ಸಂಕರದ ಸಂಕೇತವೊಂದು ಕೋಮುಗಲಭೆಗಳಿಗೆ ಕಾರಣವಾಗುವ ಸೂಕ್ಷ್ಮ ವಿಷಯವಾಯಿತು. ಮುಸ್ಲಿಮರ ಜತೆ ಅದನ್ನು ಸಮೀಕರಿಸಲಾಯಿತು. ಮುಸ್ಲಿಮರೂ ಅದನ್ನು ತಮ್ಮ ಸಾಂಸ್ಕೃತಿಕ ಗುರುತು ಎಂಬಂತೆ ಭಾವಿಸಿದರು. ಓಟಿನ ರಾಜಕಾರಣಕ್ಕೆ ಉರ್ದುಭಾಷೆಗೆ ಉತ್ತೇಜನ ನೀಡುವುದು, ನೀಡದಿರುವುದು ಅಜೆಂಡ ಆಯಿತು. ಈ ರಾಜಕೀಯ ಬೆಳವಣಿಗೆಗಳು ಕರ್ನಾಟಕದ ಬಹುಭಾಷಿಕ ಪರಿಸರದ ಮೇಲೂ ಪ್ರಭಾವಬೀರಿದವು. ಹೀಗಾಗಿ ನಿರ್ದಿಷ್ಟ ಧಾರ್ಮಿಕ ಸಮುದಾಯದ ಭಾಷೆಗಳಲ್ಲದ ಕನ್ನಡ, ತಮಿಳು, ತೆಲುಗು, ತುಳು ಇರುವ ಬಹುಭಾಷಿಕ ಪರಿಸರಕ್ಕೂ, ನಿರ್ದಿಷ್ಟ ಧಾರ್ಮಿಕ ಸಮುದಾಯ ಬಳಸುವ ಉರ್ದು-ಬ್ಯಾರಿಗಳ ಜತೆ ಕನ್ನಡ ಇರುವ ಬಹುಭಾಷಿಕ ಪರಿಸರಕ್ಕೂ ಇರುವ ವ್ಯತ್ಯಾಸ ನಿರ್ಣಾಯಕವಾಗುತ್ತದೆ.

ಹೈದರಾಬಾದ್ ನಿಜಾಮರ ಆಳ್ವಿಕೆಯಲ್ಲಿ ಉರ್ದು, ಗುಲಬರ್ಗಾ ಬೀದರ ರಾಯಚೂರು ಕೊಪ್ಪಳ ಜಿಲ್ಲೆಗಳಲ್ಲಿ, ಬಹುಸಂಖ್ಯಾತ ಭಾಷೆಯಾದ ಕನ್ನಡವನ್ನು ಬದಿಗೊತ್ತಿ, ಶಿಕ್ಷಣ-ಆಡಳಿತಗಳಲ್ಲಿ ವಿರಾಜಮಾನವಾಗಿತ್ತಷ್ಟೆ. ಆಗ ಕನ್ನಡಪರ ಎಂದರೆ ಉರ್ದುವಿರುದ್ಧ ಎಂಬ ರೀತಿಯಲ್ಲಿ ಚಳುವಳಿ ನಡೆದವು. ಗೋಕಾಕ ಚಳುವಳಿ, ಉರ್ದುವಾರ್ತೆ ಪ್ರಸಾರ ಪ್ರಕರಣಗಳಲ್ಲಿ ಹೀಗೆ ಆಯಿತು. ಈ ಭಾಷಿಕ ಗಲಭೆಗಳ ಹೊತ್ತಲ್ಲಿ ನಿರ್ದಿಷ್ಟ ಭಾಷೆಯಲ್ಲಿ ಮಾತಾಡು

ವುದು ಎಂದರೆ ಆಕ್ರಮಣಕ್ಕೆ ಒಳಗಾಗುವುದು ಎಂಬಂಥ ನಾಜೂಕಿನ ಸ್ಥಿತಿ ಪರ್ಯಟ್ಟಿತ್ತು. ಇದಕ್ಕೆ 'ಲಂಕೇಶ್ ಪತ್ರಿಕೆ' ವರದಿಮಾಡಿದ ಒಂದು ಘಟನೆಯನ್ನು ಇಲ್ಲಿ ಉಲ್ಲೇಖಿಸಬೇಕು. ೧೯೯೨ರಲ್ಲಿ ಕೋಲಾರದಲ್ಲಿ ಕೋಮುಗಲಭೆಗಳು ಉಂಟಾದವು. ಒಂದು ಮತದ ಕೋಮುವಾದಿಗಳು 'ಇವತ್ತು ಅವರ ಕಡೆಯ ಒಬ್ಬನನ್ನಾದರೂ ಮುಗಿಸಬೇಕು' ಎಂದು ಕತ್ತಲಲ್ಲಿ ತಲವಾರ್ ಹಿಡಿದು ಕಾಯುತ್ತಿದ್ದರು. ಇದನ್ನರಿಯದ ಒಬ್ಬ ಹುಡುಗ ಸಿಳ್ಳೆ ಹಾಕುತ್ತ, ಹಾಡುತ್ತ ಆ ದಾರಿಯಲ್ಲಿ ಬಂದ. ಗುಂಪಿನವರು ಅವನ ಮತವನ್ನ ಕಂಡುಹಿಡಿಯಬೇಕೆಂದು 'ಏ ಕೌನ್ ರೇ ವೋ?' (ಏ ಯಾರೋ ಅದು) ಎಂದು ಉರ್ದುವಿನಲ್ಲಿ ಕೇಳಿದರು. ಆತ ತಮಾಷೆಯಿಂದ 'ಮ್ಯೆ' (ನಾನು) ಎಂದ. ಕೂಡಲೇ ಅವನನ್ನು ತಲವಾರುಗಳಿಂದ ಇರಿದು ಹಾಕಲಾಯಿತು. ವಾಸ್ತವವಾಗಿ ಆತ ಬ್ರಾಹ್ಮಣರ ಹುಡುಗನಾಗಿದ್ದ. ಅವನಾಡಿದ ಭಾಷೆಯೇ ಅವನ ಮೃತ್ಯುವಾಗಿ ಬಿಟ್ಟಿತು.

## ಕೆಲವು ಗೊಂದಲಗಳು

ಓದುಬರೆಹ ಕಲಿತವರಲ್ಲೂ ಉರ್ದು ಎಂಬುದು ಒಂದು ವಿದೇಶೀ ಭಾಷೆ ಎಂಬ ಗ್ರಹಿಕೆಯಿದೆ. ಉರ್ದು ಜತೆ ಲಗತ್ತಾಗಿರುವ ಇಸ್ಲಾಂ ಹೊರಗಿನಿಂದ ಬಂದ ಧರ್ಮವಾಗಿರುವುದು ಇದಕ್ಕೆ ಒಂದು ಕಾರಣವಿರಬೇಕು. ಕೇಳಿಸಿಕೊಂಡಾಗ ಹಿಂದಿಯಂತಿದ್ದರೂ, ನೋಡಲು ಅಪರಿಚಿತ ಫಾರಸಿ ಲಿಪಿಯಲ್ಲಿರುವುದು ಇನ್ನೊಂದು ಕಾರಣವಿರಬೇಕು. ಭಾಷಾವಾರು ಪ್ರಾಂತ್ಯಗಳ ವಿಂಗಡಣೆಯಾದ ಮೇಲೂ, ಆಯಾ ರಾಜ್ಯಗಳಲ್ಲಿ ರಾಜ್ಯಭಾಷೆಗಳಿಗೆ ಶಿಕ್ಷಣ ಆಡಳಿತಗಳಲ್ಲಿ ನಿರೀಕ್ಷಿಸಿದ ಜಾಗ ಸಿಗಲಿಲ್ಲ. ರಾಷ್ಟ್ರರಾಜಕಾರಣದ ಕಾರಣಗಳಿಂದ ಹಿಂದಿಯೂ, ಬ್ರಿಟೀಶರ ಕಾಲದ ಶಿಕ್ಷಣನೀತಿ ಮುಂದುವರೆದ ಕಾರಣದಿಂದ ಇಂಗ್ಲೀಶೂ, ಈ ದೇಶಿ ಭಾಷೆಗಳಿಗೆ ಪ್ರಬಲ ಸ್ಪರ್ಧಿಗಳಾದವು. ಕನ್ನಡಕ್ಕೆ ತಕ್ಕ ಸ್ಥಾನ ಸಿಗದಿರಲು ಈ ನಿಜಕಾರಣಗಳನ್ನು ಅರಿಯದ ಕನ್ನಡ ಚಳುವಳಿಗಾರರು, ಕನ್ನಡದ ಜತೆ ಬದುಕುತ್ತಿರುವ ತಮಿಳು ಉರ್ದು ಮುಂತಾದ ಜನಭಾಷೆಗಳನ್ನು 'ಶತ್ರು'ಗಳಾಗಿ ಭಾವಿಸಿಬಿಡುತ್ತಾರೆ. ಕನ್ನಡವು ಗುಲಬರ್ಗಾ ಬೀದರುಗಳಂಥ ಕಡೆ ಮರಾಠಿ-ಉರ್ದುಗಳ ಪ್ರಭಾವಕ್ಕೆ ಒಳಗಾಗಿದೆಯಷ್ಟೆ. ಇದರಿಂದ ಕನ್ನಡದ 'ಮೂಲಸತ್ವ' ನಾಶವಾಗಿ, ಅದು ಅಶುದ್ಧವಾಗಿದೆ ಎಂದು ಕೂಡ ತಿಳಿಯಲಾಗಿದೆ. ಬಹುಭಾಷಿಕ ಪರಿಸರದಿಂದ ಒಂದು ಭಾಷೆಗೆ ಬರುವ ಬಹುತ್ವಗುಣವನ್ನು ತಿಳಿಯದೆ ಹೋದಾಗ ಹೀಗಾಗುತ್ತದೆ. ಇನ್ನೊಂದು ಪ್ರಶ್ನೆಯಿದೆ. ಆಳುವ ಪ್ರಭುತ್ವ ಒಂದು ಭಾಷೆಯನ್ನು ಹೇರಿದಾಗ, ಜನ ತಮ್ಮ ಭಾಷೆಗಳನ್ನು ಇಟ್ಟುಕೊಂಡು ಕಲಿಯುತ್ತಾರೋ ಬಿಟ್ಟುಕೊಟ್ಟು ಕಲಿಯುತ್ತಾರೋ? ನಿಜಾಮರ ಕಾಲದಲ್ಲಿ ತೆಲುಗು-ಕನ್ನಡ-ಮರಾಠಿಗಳ ಮೇಲೆ ಉರ್ದುವನ್ನು ಹೇರಲಾಗಿತ್ತಷ್ಟೆ. ಆಗ ಮೇಲ್ಜಾತಿಯ ಸ್ಥಿತಿವಂತ ಕುಟುಂಬದವರೆಲ್ಲ ಉರ್ದು ಕಲಿತು ಆಡಳಿತದಲ್ಲಿ ಸೇರಿ ಅದರ ಲಾಭ ಪಡೆದರು. ಆದರೆ ಹಳ್ಳಿಗಾಡಿನ ಕೆಳಹಂತದ ದುಡಿವ ಸಮುದಾಯಗಳು ತಂತಮ್ಮ

ತಾಯ್ನುಡಿಗಳನ್ನು ತ್ಯಾಗಮಾಡಲಿಲ್ಲ. ಈಗಲೂ ಈ ಭಾಗದ ಸಾವಿರಾರು ಮುಸ್ಲಿಮರ ಮನೆ ಮಾತು ತೆಲುಗು ಹಾಗೂ ಕನ್ನಡ. ೧೮, ೧೯, ೨೦ನೇ ಶತಮಾನಗಳಲ್ಲಿ ಕನ್ನಡದಲ್ಲಿ ಲಾವಣಿ, ತತ್ವಪದ ರಚಿಸಿದ ಅನೇಕ ಕವಿಗಳು ಮತದಲ್ಲಿ ಮುಸ್ಲಿಮರಾಗಿದ್ದರು. ಅವರು ಉರ್ದು ಹಾಗೂ ಕನ್ನಡ ಎರಡರಲ್ಲೂ ಸಾಹಿತ್ಯರಚನೆ ಮಾಡಿದರು. ರಾಜಕೀಯ ಅವಕಾಶಗಳಿಗಾಗಿ ಇನ್ನೊಂದು ಭಾಷೆ ಕಲಿಯುವುದು ಬೇರೆ; ಸಮುದಾಯಗಳ ಬದ್ಧತೆಗಾಗಿ ಹಾಗೂ ಆರ್ಥಿಕ ಪರಿಸ್ಥಿತಿಗಳಿಂದಾಗಿ ಅಧಿಕಾರಸ್ಥ ಭಾಷೆಯನ್ನು ಕಲಿಯದಿರುವುದು ಬೇರೆ.

## ಬಹುಭಾಷಿಕತೆ ಮತ್ತು ಅಧಿಕಾರ

ಬಹುಭಾಷಿಕತೆ ಮುಖ್ಯವಾಗಿ ಎರಡು ಕಾರಣಗಳಿಂದ ಉಂಟಾಗುತ್ತದೆ. ೧) ರಾಜಕೀಯ ಅಧಿಕಾರದ ಜತೆ ಬರುವ ಹೊಸಭಾಷೆಯಿಂದ ೨) ಜತೆವಾಸದಲ್ಲಿ ಸಂಗಾತಿಯಾಗಿರುವ ಭಾಷೆಯಿಂದ. ಅಧಿಕಾರದ ಜತೆ ಬರುವ ಭಾಷೆ ಯಾವತ್ತೂ, ಮತ್ತೊಂದರ ಜಾಗವನ್ನು ಬಲಪ್ರಯೋಗದಿಂದ ಆಕ್ರಮಿಸಿಕೊಳ್ಳುತ್ತದೆ. ಸಮಾನನೆಲೆಯಲ್ಲಿ ನಿಂತು ಕೊಳುಕೊಡೆ ಮಾಡುವುದಿಲ್ಲ. ಎತ್ತರದಲ್ಲಿ ನಿಂತು ಪ್ರಭಾವಬೀರುತ್ತದೆ. ಧಣಿ-ಆಳುಗಳ ಸಂಬಂಧವಿದು. ಮರಾಠಿ, ಉರ್ದು, ಫಾರಸಿ, ಇಂಗ್ಲೀಶ್ ಭಾಷೆಯ ಪ್ರಭುತ್ವಗಳು ಕರ್ನಾಟಕದಲ್ಲಿ ಆಳ್ವಿಕೆ ಮಾಡುವಾಗ ಬಹುಭಾಷಿಕತೆ ಉಂಟಾಗಿತ್ತು. ಆದರೆ, ಪ್ರಭುತ್ವಗಳು ಇಲ್ಲವಾದ ಮೇಲೆ ಅವು ಧಣಿಸ್ಥಾನ ಕಳೆದುಕೊಂಡು, ಸಂಗಾತಿಸ್ಥಾನ ಪಡೆದವು. ಈಗ ಕನ್ನಡದ ಜತೆ ಉರ್ದು-ಮರಾಠಿಗಳ ಸ್ಥಾನ ಹೀಗಿದೆ. ಪ್ರಭುತ್ವದ ಹಿನ್ನೆಲೆ ಹೋದರೂ ಸಮುದಾಯಗಳ ಭಾಷೆಗಳಾಗಿದ್ದರಿಂದ ಅವಕ್ಕೆ ಸಂಗಾತಿಸ್ಥಾನ ಸಿಕ್ಕಿತು. ಆದರೆ ಫಾರಸಿಯು ತನ್ನ ಪ್ರಭುತ್ವ ಇಲ್ಲವಾದ ಬಳಿಕ ತಾನೂ ಕಣ್ಮರೆಯಾಯಿತು. ಯಾಕೆಂದರೆ ಫಾರಸಿ ಮಾತಾಡುವ ಸಮುದಾಯಗಳು ಇಲ್ಲವಾಗಿದ್ದವು. ಈ ಲೆಕ್ಕದಲ್ಲಿ ಇಂಗ್ಲೀಶಿಗೂ ಫಾರಸಿಯ ಗತಿಯೇ ಆಗಬೇಕಿತ್ತು. ಹಾಗಾಗದೆ ಅದು ಈಗಲೂ ಧಣಿಯಾಗೇ ಮುಂದುವರೆದಿದೆ. ಕಾರಣ - ಬ್ರಿಟಿಶರು ಹೋದಮೇಲೆ ದೇಶೀಯ ಆಡಳಿತಗಾರರು ಅದನ್ನು ಶಿಕ್ಷಣ-ಆಡಳಿತಗಳ ಭಾಷೆಯನ್ನಾಗಿ ಮುಂದುವರೆಸಿದ್ದು. ಇಂಗ್ಲೀಶು ಬ್ರಿಟಿಶರ ಜತೆ ಮರಳಿ ಹೋಗದಷ್ಟು ಆಳವಾಗಿ ಬೇರೂರಿತ್ತು. ಈ ಭಾಷೆಯ ಹಿಂದೆ ವಿಜ್ಞಾನ, ತಂತ್ರಜ್ಞಾನ, ಆಧುನಿಕತೆ, ವೈಚಾರಿಕತೆಗಳ ದೊಡ್ಡಶಕ್ತಿಯು ಇದ್ದುದು, ಇದಕ್ಕೆ ಇನ್ನೊಂದು ಕಾರಣ. ಈಗ ಭಾರತದ ರಾಜಕಾರಣ-ಆರ್ಥಿಕತೆಗಳನ್ನು ನಿಯಂತ್ರಿಸಬಲ್ಲ ಜಾಗತೀಕರಣದ ಭಾಷೆಯಾಗಿರುವುದರಿಂದ, ಇಂಗ್ಲೀಶಿನ ಧಣಿತನ ಮತ್ತಷ್ಟು ಬಲಗೊಂಡಿದೆ. ಇದು ಅಧಿಕಾರಗಳ ಜತೆ ಬರುವ ಭಾಷಾ ಹೇರಿಕೆಯಿಂದಾಗುವ ಬಹುಭಾಷಿಕತೆ.

ಆದರೆ ಕನ್ನಡದ ಜತೆ ತೆಲುಗು, ಮರಾಠಿ, ಉರ್ದು, ತಮಿಳು, ಮಲೆಯಾಳಂ ಭಾಷೆಗಳು ಸೇರಿ ಉಂಟಾಗಿರುವ ಬಹುಭಾಷಿಕತೆಯಲ್ಲಿ, ಈ ಯಜಮಾನಿಕೆಯ ಗುಣವಿಲ್ಲ. ಸಂಗಾತಿಯ

ಗುಣವಿದೆ. ರಾಜಕೀಯ ಬೆಳವಣಿಗೆಗಳಿಂದ ಸೊಲ್ಲಾಪುರ ಬೆಳಗಾವಿಗಳಲ್ಲಿ ಮರಾಠಿಗೆ ಕನ್ನಡದ ಇದಿರು ಧಣಿಯ ಗುಣ ಬಂದಿದೆ. ಇಲ್ಲಿ ಮರಾಠಿ ಭಾಷಿಕರ ರಾಜಕಾರಣವು ಕನ್ನಡ ಮತ್ತು ಉರ್ದು ಭಾಷಿಕರನ್ನು ಒಂದಾಗಿ ಪ್ರತಿರೋಧ ಮಾಡುವಂತೆ ಕೂಡ ಸೇರಿಸಿಬಿಟ್ಟಿದೆ. ಇದೇ ರೀತಿ ಕನ್ನಡವು ಹಕ್ಕಿಪಿಕ್ಕಿ, ಲಂಬಾಣಿ, ಕೊಡವ, ಕೊಂಕಣಿಗಳ ಎದುರು ಧಣಿಯ ಗುಣವನ್ನು ಪಡೆದುಕೊಂಡಿದೆ. ಬಹುಭಾಷಿಕ ಪರಿಸರದಲ್ಲಿ ಸಮಾನ ಶಕ್ತಿಯ ಭಾಷೆಗಳು ಕೊಳುಕೊಡೆ ಮಾಡಿದರೆ ಪ್ರಭಾವಗಳು ಪರಸ್ಪರವಾಗಿರುತ್ತವೆ. ಅಸಮಾನ ಶಕ್ತಿಯ ಭಾಷೆಗಳು ಕೊಳುಕೊಡೆ ಮಾಡಿದರೆ, ಪ್ರಭಾವ ಏಕಮುಖವಾಗಿರುತ್ತದೆ. ಯಾವತ್ತೂ ಒಂದು ಭಾಷೆಗೆ ತನಗೆ ತಾನೇ ಸೇವಕ ಅಥವಾ ಧಣಿಯಾಗುವ ಗುಣಗಳಿರುವುದಿಲ್ಲ. ಅದನ್ನು ಬಳಸುವ ಸಮುದಾಯಕ್ಕೆ ಇರುವ ಆರ್ಥಿಕ-ರಾಜಕೀಯ ಸಾಮರ್ಥ್ಯಗಳಿಂದ ಆಳುತನ-ಧಣಿತನ ಒದಗುತ್ತವೆ. ಮಲೆಯಾಳಂ, ಕನ್ನಡ, ಕೊಡವಗಳಂಥ ಅಧಿಕಾರಸ್ಥ ಭಾಷೆಗಳ ಪ್ರಭಾವದೊಳಗೆ ಬದುಕಿರುವ ಎರವರ ಬುಡಕಟ್ಟಿನ ಭಾಷೆಗೂ, ಕೂಲಿನಾಲಿ ಮಾಡಿಕೊಂಡು ಜೀವಿಸಿರುವ ಅವರ ಆರ್ಥಿಕ ಸ್ಥಿತಿಗೂ ಇರುವ ಸಂಬಂಧ ಅರಿಯಲು ಸಾಧ್ಯವಾಗಬೇಕಿದೆ. 'ಬಹುಭಾಷಿಕ ಪರಿಸರ ಸಾಂಸ್ಕೃತಿಕ ಸಿರಿವಂತಿಕೆಗೆ ಕಾರಣವಾಗುತ್ತದೆ' ಎಂಬ ಸಿದ್ಧಾಂತ ಇಲ್ಲಿ ಬಿದ್ದುಹೋಗಬಹುದು. ಭಾಷೆಗೆ ಧಣಿತನ ಬರಲು ಆ ಭಾಷಿಕರು ಬಹುಸಂಖ್ಯೆಯಲ್ಲಿ ಇರಬೇಕೆಂದಿಲ್ಲ. ಇಂಗ್ಲೀಶರು ಭಾರತದಲ್ಲಿದ್ದಾಗ ಹಿಡಿಮಂದಿ ಇದ್ದರು. ಆದರೆ ಅವರಿಗಿದ್ದ ಅಧಿಕಾರ ಬಲದಿಂದ ಇಂಗ್ಲೀಶಿಗೆ ಆಳುವಗುಣ ಬಂದಿತ್ತು.

ಮತ್ತೊಂದು ಕುತೂಹಲದ ಸಂಗತಿಯಿದೆ. ಅದೆಂದರೆ - ಒಂದು ಭಾಷೆ ಅಧಿಕಾರಸ್ಥರ ಭಾಷೆಯಾಗಿದ್ದಾಗ ಕೇವಲ ಪ್ರಭಾವಬೀರುವ ಆಕ್ರಾಮಕ ಕೆಲಸವನ್ನೇ ಮಾಡಬೇಕೆಂದಿಲ್ಲ. ಸಂಗಾತಿಯಂತೆಯೂ ಕೆಲಸ ಮಾಡುತ್ತಿರಬಹುದು. ಬದಲಾಗುವ ರಾಜಕೀಯ ಬೆಂಬಲ-ದಮನಗಳಾಚೆ, ಸಮುದಾಯಗಳು ಭಾಷೆಗಳ ಜತೆ ನಿತ್ಯಬದುಕಲ್ಲಿ ಅನೇಕಬಗೆಯ ಸಂವಾದ ಏರ್ಪಡಿಸಿಕೊಂಡಿರಬಹುದು. ಮಹಾರಾಷ್ಟ್ರ ಏಕೀಕರಣ ಸಮಿತಿಯ ರಾಜಕೀಯದ ಹೊರತಾಗಿಯೂ, ಬೆಳಗಾವಿ ಸೀಮೆಯ ಹಳ್ಳಿಗಾಡಿನಲ್ಲಿ ಕನ್ನಡ-ಮರಾಠಿ-ಉರ್ದು ಕುಟುಂಬಗಳ ಸಂಬಂಧಗಳು ಮಾನವೀಯವಾಗಿರಬಲ್ಲವು. 'ಏನಂದ್ರಿ' ಕತೆಯಲ್ಲಿ ಬರುವಂತೆ ಅಧಿಕಾರಿಯು ಬಂಡಿಯವನ ಜತೆ ಸಂವಾದ ಮಾಡಲಾಗದ ಹೊತ್ತಲ್ಲೇ, ಕನ್ನಡ ಉರ್ದುಗಳು ಸಮುದಾಯದ ಭಾಗವಾಗಿದ್ದ ಸಂತರಲ್ಲಿ ಕವಿಗಳಲ್ಲಿ ಜನರಲ್ಲಿ ಸಂವಾದ ಮಾಡುತ್ತಿದ್ದವು.

ರಾಜಕೀಯ ಆಳ್ವಿಕೆಗಳು ಭಾಷಿಕ ಸಮುದಾಯಗಳ ನಡುವಿನ ಸಂಬಂಧಗಳನ್ನು ಪ್ರಭಾವಿಸುವುದಿಲ್ಲ ಎಂತಲ್ಲ; ರಾಜಕೀಯ ಏರುಪೇರುಗಳಾಚೆ ಕೂಡ ಈ ಸಂಬಂಧಗಳು ತಮ್ಮದೇ ಆದ ಲಯದಲ್ಲಿ ಇರಬಲ್ಲವು. ಬಹುಭಾಷಿಕ ಸಂದರ್ಭದ ಈ ಸಂಗತಿ ತುಂಬ ಮಹತ್ವದ್ದು. ಬಹಮನಿಗಳು, ಆದಿಲಶಾಹಿಗಳು, ನಿಜಾಮರು ಉತ್ತರ ಕರ್ನಾಟಕ ಭಾಗಗಳನ್ನು

ಆಳುವಾಗ, ದಖನಿ ಉರ್ದು ಇಸ್ಲಾಂಗಳತ್ತ ಜನರ ಎಳೆತ ಸಹಜವಾಗಿ ಹೆಚ್ಚಿತ್ತು. ಆದರೆ ಈ ಕಾಲದಲ್ಲಿ ಮುಸ್ಲಿಂ ಸಂತರು, ಕವಿಗಳು, ಸಂಗೀತಗಾರರು ಕನ್ನಡದತ್ತ ಹಾಗೂ ನಾಥ ಮುಂತಾದ ಅನುಭಾವಿ ಪಂಥಗಳತ್ತ ಕೂಡ ವಾಲಿಬಿಟ್ಟಿದ್ದರು. ನಮಗೆ ಕನ್ನಡ, ಮರಾಠಿ, ತೆಲುಗುಗಳ ಮೇಲೆ ಆ ಕಾಲದ ಫಾರಸಿ ದಖನಿ ಬೀರಿದ ಪರಿಣಾಮ ತಿಳಿಯುವ ಸೌಲಭ್ಯವಿದೆ. ಆದರೆ ಕರ್ನಾಟಕದಲ್ಲಿ ೪ ಶತಮಾನಗಳ ಕಾಲದಿಂದ ಸೃಷ್ಟಿಯಾಗಿರುವ ದಖನಿ ಉರ್ದು ಸಾಹಿತ್ಯದಲ್ಲಿ ಕನ್ನಡದ ಪ್ರಭಾವ ಏನು ಎಂಬುದನ್ನು ತಿಳಿಯಲು ಸಾಧ್ಯವೇ ಆಗಿಲ್ಲ. ಇದು ಸಾಧ್ಯವಾದರೆ ಅಧಿಕಾರಸ್ಥ ಭಾಷೆಯ ಪ್ರಭಾವಗಳ ಬಗ್ಗೆ ನಮ್ಮ ತಿಳುವಳಿಕೆ ಬದಲಾಗಬಹುದು.

## ಬಹುಸಂಖ್ಯಾತ ಭಾಷಿಕರ ಮೂಲಭೂತವಾದ

ಭಾಷಾಮೂಲಭೂತವಾದ ಎಂದರೆ ನಮ್ಮ ಭಾಷೆಯೇ ಶ್ರೇಷ್ಠ, ಉಳಿದವರು ನಮ್ಮ ಭಾಷೆಯನ್ನು ಕಲಿಯಬೇಕು. ಅನ್ಯಭಾಷಿಕರಿಂದ ನಮಗೆ ಕಷ್ಟಗಳು ಬಂದಿವೆ- ಇತ್ಯಾದಿಯಾಗಿ ಆಲೋಚಿಸುವುದು. ಯಾವತ್ತೂ ಸಮುದಾಯಗಳು ಆರ್ಥಿಕ-ರಾಜಕೀಯ ತುಳಿತಕ್ಕೆ ಈಡಾಗಿದ್ದಾಗ, ಪ್ರಭುತ್ವಗಳನ್ನು ವಿರೋಧಿಸಲು ಕೂಡ ತಮ್ಮ ಭಾಷಾಭಿಮಾನದ ಹೆಸರಲ್ಲಿ ಒಗ್ಗೂಡುತ್ತವೆ. ಪ್ರಭುತ್ವದ ಭಾಷೆಯನ್ನು ವಿರೋಧಿಸುತ್ತವೆ. ನಿಜಾಮನ ವಿರುದ್ಧ ಬಂಡೇಳಲು ಹೈದರಾಬಾದ್ ಕರ್ನಾಟಕದಲ್ಲಿ ಕನ್ನಡಾಭಿಮಾನವು ಉರ್ದುವಿರೋಧದಲ್ಲಿ ಕಾಣಿಸಿಕೊಂಡಿತು. ಪ್ರಭುತ್ವ-ಉರ್ದು-ಇಸ್ಲಾಂ ಈ ಮೂರೂ ಎದುರಾಳಿಗಳಾಗಿ ಸಮೀಕರಣಗೊಂಡವು. ಕೆಲವೊಮ್ಮೆ ಭಾಷೆಯ ನೆಪದಲ್ಲಿ ತುಳಿತಕ್ಕೊಳಗಾದ ಸಮುದಾಯಗಳು ಒಗ್ಗೂಡುವಾಗ ಒಂದೇ ಧರ್ಮ ಇದ್ದರೂ ಅಡ್ಡಿ ಬರುವುದಿಲ್ಲ. ಪಾಕಿಸ್ತಾನದ ವಿರುದ್ಧ ಬಾಂಗ್ಲಾದೇಶೀಯರು ಹೋರಾಡುವಾಗ (೧೯೭೧ ) ಬಂಗಾಳಿ ಅಭಿಮಾನವು ಉರ್ದು ಹೇರಿಕೆಯ ವಿರೋಧವಾಗಿ ರೂಪುಗೊಂಡಿತು. ಮೇಲಿನ ಎರಡೂ ಪ್ರಸಂಗಗಳಲ್ಲಿ ಆಳುವ ಪ್ರಭುತ್ವಗಳು ಜನರ ಕಷ್ಟಕ್ಕೆ ಕಾರಣವಾಗಿದ್ದವು. ಪ್ರಭುತ್ವ ವಿರೋಧವು ಭಾಷೆಯ ಮುಖದಲ್ಲಿ ವ್ಯಕ್ತವಾಯಿತು.

ಆದರೆ ಶಿವಸೈನಿಕರು ಮಹಾರಾಷ್ಟ್ರದಲ್ಲಿ ಕನ್ನಡಿಗರ ಮೇಲೆ ಮಾಡಿದ ಹಲ್ಲೆ, ಕಾವೇರಿ ವಿವಾದದಲ್ಲಿ ತಮಿಳರ ಮೇಲೆ ಕನ್ನಡಿಗರು ಮಾಡಿದ ಹಲ್ಲೆ - ಈ ಎರಡೂ ಪ್ರಸಂಗಗಳಲ್ಲಿ ಮತಧರ್ಮಗಳು ನಡುವೆ ಇರಲಿಲ್ಲ. ಭಾಷಿಕ ಸಮುದಾಯಗಳು ತಮ್ಮ ಆರ್ಥಿಕ ಬಿಕ್ಕಟ್ಟಿನ ಕಾರಣವನ್ನು, ತಮ್ಮಂತೆ ದುಡಿದು ಬದುಕುತ್ತಿರುವ ಇನ್ನೊಂದು ಭಾಷಿಕ ಸಮುದಾಯದಲ್ಲಿ ಕಂಡುಕೊಂಡವು. ಇಡೀ ಸಮುದಾಯವೇ ಹೀಗೆ ವರ್ತಿಸುತ್ತದೆ ಎನ್ನಲಾಗದು. ಇಂಥ ಗಲಭೆಗಳಿಗೆ ಆಯಾ ಭಾಷಿಕರಲ್ಲಿರುವ ವ್ಯಾಪಾರಿವರ್ಗದ ಫಿತೂರಿಗಳಿರುವುದು ಗೊತ್ತಾಗುತ್ತದೆ. ತಮ್ಮ ಹಿತಕ್ಕೆ ಧಕ್ಕೆ ಬಂದಾಗ, ಈ ವರ್ಗಗಳು ಇಡೀ ಭಾಷಿಕ ಸಮುದಾಯದ ಪ್ರಶ್ನೆಯನ್ನಾಗಿ ಮಾಡಿ 'ನಿಮ್ಮ ಹಿಂದುಳಿದಿರುವಿಕೆಗೆ ಕಾರಣ ಇವರು' ಎಂದು ಹುಸಿಶತ್ರುಗಳನ್ನು

ಸೃಷ್ಟಿಸಿಬಿಡುತ್ತಾರೆ. ಬನಹಟ್ಟಿ (ಜಮುಖಂಡಿ) ಭಾಗದಲ್ಲಿ ಬಟ್ಟೆ ನೇಯುವವರು ಮರಾಠಿ ಭಾಷಿಕರು. ಅವರ ಮಾರುಕಟ್ಟೆ ಇರುವುದು ಸಾಂಗಲಿ ಮುಂತಾದ ಮಹಾರಾಷ್ಟ್ರ ಊರುಗಳಲ್ಲಿ. ಇದು ಕರ್ನಾಟಕದ ಜವಳಿ ವ್ಯಾಪಾರಿಗಳಿಗೆ ಇಷ್ಟವಿಲ್ಲ. ಹೀಗಾಗಿ ಕನ್ನಡ-ಮರಾಠಿ ಗಲಭೆಗಳು ಭುಗಿಲೆದ್ದಾಗಲೆಲ್ಲ ಈ ನೇಕಾರರು ಹಲ್ಲೆಗೊಳಗಾಗುತ್ತಾರೆ.

ಕರ್ನಾಟಕ-ಮಹಾರಾಷ್ಟ್ರ ಗಡಿಯಲ್ಲಿರುವ ಕಾಗವಾಡ ಎಂಬ ಪುಟ್ಟ ಊರಿನಲ್ಲಿ ನನಗಾದ ಒಂದು ಅನುಭವ ವಿಚಿತ್ರವಾಗಿತ್ತು. ಭಾಷಾ ಚಳುವಳಿಗಾರರು ನಿಜಶತ್ರುಗಳನ್ನು ಬಿಟ್ಟು, ಸಂಗಾತಿ ಭಾಷೆಗಳನ್ನು ಶತ್ರುಗಳನ್ನಾಗಿ ಕಟ್ಟಿಕೊಳ್ಳುವ ದುರಂತ ಕುರಿತು, ನಾನು ಅಲ್ಲಿ ಮಾತಾಡುವುದಿತ್ತು. ಉಪನ್ಯಾಸ ಮುಗಿದ ಬಳಿಕ ಮಿತ್ರರೊಬ್ಬರು ನನ್ನನ್ನು ತಮ್ಮ ಮನೆಗೆ ಕರೆದೊಯ್ದರು. ಅವರ ಮನೆ ಮಾತು ಮರಾಠಿ. ಅವರ ಹೆಂಡತಿ ಬೆಳಗಾವಿಯವರು. ಮನೆಗೆ ಹೋದಾಗ ಆಕೆ ರೇಡಿಯೋದಲ್ಲಿ ಮರಾಠಿ ಕಾರ್ಯಕ್ರಮವನ್ನು ಕೇಳಿಕೊಂಡು ಕುಳಿತಿದ್ದರು. ನನ್ನ ಮಿತ್ರರು ಧಾವಿಸಿದವರೇ ಚಟ್ ಎಂದು ರೇಡಿಯೋ ಬಂದ್ ಮಾಡಿದರು. ಕರ್ನಾಟಕದಲ್ಲಿದ್ದು ಮರಾಠಿ ಕಾರ್ಯಕ್ರಮ ಕೇಳುತ್ತಿರುವುದು ನನಗೆ ಗೊತ್ತಾಯಿತಲ್ಲ. ಅಪರಾಧಿಭಾವ ಅವರಲ್ಲಿ ಇದ್ದಂತಿತ್ತು. ಬೆಳಗಾವಿಯ ಕನ್ನಡ-ಮರಾಠಿ ಸಂಘರ್ಷಗಳು ಮನೆಮನೆಗಳಲ್ಲಿ ತಮ್ಮ ಕೆಟ್ಟನೆರಳನ್ನು ರವಾನಿಸಿ, ಎಂಥಾ ಕಾಂಪ್ಲೆಕ್ಸಿಟಿಯನ್ನು ಸೃಷ್ಟಿಸಿವೆ ಎಂದು ವಿಷಾದವಾಯಿತು. ಆದರೆ ಸಂಗಾತಿ ಭಾಷಿಕರ ಈ ಒಳಜಗಳದೊಳಗೆ ಇಂಗ್ಲೀಶು, ಆ ಮನೆಯ ದಿನಪತ್ರಿಕೆಯಲ್ಲಿ ಮಕ್ಕಳ ಶಿಕ್ಷಣದಲ್ಲಿ, ಟೀವಿಯಲ್ಲಿ ಯಾವ ಅಳುಕೂ ಇಲ್ಲದೆ ಆರಾಮಾಗಿ ನೆಲೆಸಿತ್ತು.

ಕರ್ನಾಟಕ-ಆಂಧ್ರದ ಗಡಿ ಪ್ರದೇಶದಲ್ಲಿ ಅನೇಕ ಕಡೆ 'ಕನ್ನಡಾಭಿಮಾನ'ವು ತೆಲುಗಿನ ವಿರೋಧದಲ್ಲಿ ರೂಪುಗೊಂಡಿರುವುದುಂಟು. ಆಂಧ್ರದ ಭೂಮಾಲೀಕರು ಬಂದು ರಾಯಚೂರು ಸೀಮೆಯಲ್ಲಿ ಮಾಡಿರುವ ಆಸ್ತಿ ಕೂಡ ಈ ವಿರೋಧ ಭಾವನೆಗೆ ಕಾರಣವಾಗಿರುವುದುಂಟು. ಇದನ್ನು ಅರ್ಥ ಮಾಡಿಕೊಳ್ಳಬಹುದು. ಆದರೆ ತೆಲುಗು ಮಾತಾಡುವ ಎಲ್ಲರೂ ಕನ್ನಡ ವಿರೋಧಿಗಳು ಎಂಬಂತೆ ಕಾಣತೊಡಗಿದರೆ ಸಮಸ್ಯೆಯಾಗುತ್ತದೆ. ಉರ್ದು ವಾರ್ತೆ ಪ್ರಕರಣದಲ್ಲಿ ಕೂಡ ಕನ್ನಡದ ದುಸ್ಥಿತಿಗೆ ನಿಜಕಾರಣಗಳನ್ನು ಕಂಡುಕೊಳ್ಳಲಾಗದೆ ಸಂಗಾತಿ ಭಾಷೆಯ ವಿರುದ್ಧದ ಆಕ್ರೋಶವಾಗಿ ಮಾರ್ಪಟ್ಟಿತು. ಈಗಾಗಲೇ ಕಡಿಮೆ ಇರುವ ಕನ್ನಡ ಕಾರ್ಯಕ್ರಮದ ಸಮಯವನ್ನು ಉರ್ದು ಕಾರ್ಯಕ್ರಮ ಕಬಳಿಸುತ್ತಿದೆ ಎಂಬುದು ವಿರೋಧಕ್ಕೆ ಒಂದು ಕಾರಣವಾಗಿತ್ತು. ಆದರೆ ಮುಂದೆ ಇದೇ ಕನ್ನಡದ ಸಮಯವನ್ನು ರಾಷ್ಟ್ರೀಯ ಎಂಬ ಹೆಸರಿನ ಹಿಂದಿ ಇಂಗ್ಲೀಶ್ ಕಾರ್ಯಕ್ರಮಗಳು ಒತ್ತುವರಿ ಮಾಡಿದ್ದು ಅವರಿಗೆ ತಟ್ಟಲೇ ಇಲ್ಲ. 'ಒಂದು ಭಾಷೆಗೆ ಉತ್ತೇಜನ ಕೊಡುತ್ತಿದ್ದೇವೆ' ಎಂಬ ತೋರಿಕೆಯ ಕ್ರಮಗಳ ಮೂಲಕ, ಓಟು ಗಳಿಸುವ ರಾಜಕೀಯ ಹುನ್ನಾರಗಳು ಇಂಥ ಕೆಲಸಗಳನ್ನು ಮಾಡಿಸುತ್ತವೆ ಎಂಬುದನ್ನು ಕನ್ನಡ ಚಳುವಳಿಗಾರರು ಅರಿಯುಲಿಲ್ಲ.

## ಅಲ್ಪಸಂಖ್ಯಾತ ಭಾಷಾಮೂಲಭೂತವಾದ

ಭಾಷಿಕ ಸಮುದಾಯಗಳು ತಮ್ಮ ಸಂಕಟಗಳಿಗೆ ನಿಜಕಾರಣ ಕಂಡುಕೊಳ್ಳಲು ಆಗದೆ ಯಾವಾಗ ಭಾಷಾಮೂಲಭೂತವಾದ ಬೆಳೆಸಿಕೊಳ್ಳುತ್ತವೆಯೋ, ಆಗೆಲ್ಲ ಬಹುಭಾಷಿಕ ಪರಿಸರ ಬಗ್ಗಡವಾಗುತ್ತದೆ. ಬಹುಸಂಖ್ಯಾತ ಭಾಷಾ ಮೂಲಭೂತವಾದಕ್ಕೆ ಅನ್ಯಭಾಷಿಕರ ಸಾಂಸ್ಕೃತಿಕ ಗುರುತುಗಳು ದೇಶದ್ರೋಹದಂತೆ ಕಾಣುತ್ತವೆ. ಅದರ ಆಕ್ರಮಣಶೀಲತೆ, ಅಲ್ಪಸಂಖ್ಯಾತ ಭಾಷಿಕರಲ್ಲಿ ಆತ್ಮರಕ್ಷಣ ದಾರಿಗಳನ್ನು ಹುಡುಕಿಕೊಳ್ಳಲು ಒತ್ತಾಯಿಸುತ್ತವೆ. ಇದರಿಂದ ತಂತಮ್ಮ ಭಾಷೆಗಳಿಗೆ ಮತ್ತಷ್ಟು ಅಂಟಿಕೊಳ್ಳುವ ಆ ಮೂಲಕ ಸಾಂಸ್ಕತಿಕ ವಿಶಿಷ್ಟತೆ ಉಳಿಸಿಕೊಳ್ಳುವ, ಪರಿಸರದ ಭಾಷೆಗಳಿಗೆ ತೆರೆದುಕೊಳ್ಳುವುದೇ ಧರ್ಮದ್ರೋಹ ಎಂಬಂಥ ಆತಂಕ ಬೆಳೆಯುವ ಸಾಧ್ಯತೆಗಳಿವೆ. ಟಿಬೆಟಿಯನ್ ಭಾಷೆಯ ರಕ್ಷಣೆ ಎಂದರೆ ಅವರ ಸಾಂಸ್ಕೃತಿಕ ರಾಜಕೀಯ ಗುರುತುಗಳ ರಕ್ಷಣೆ ಕೂಡ. ತಮ್ಮ ಧಾರ್ಮಿಕ ಪರಂಪರೆಗೆ ಕೊಂಡಿ ಕಲ್ಪಿಸುವ ಫಾರಸಿ ಅರಬಿಗಳನ್ನು ಸಾಂಕೇತಿಕವಾಗಿ ಬಳಸಿಕೊಂಡಿರುವ ಭಾರತೀಯ ಮುಸ್ಲಿಮ ರಿಗೆ, ಉರ್ದು ಸಂಪರ್ಕ ಕೊಂಡಿಯಂತಹ ಭಾವನೆ ನೀಡುತ್ತಿರಬಹುದು. ವಾಸ್ತವದಲ್ಲಿ ಉರ್ದು ಅರಬ್ ಜಗತ್ತಿನಲ್ಲಿ ಯಾರಿಗೂ ಅರ್ಥವಾಗದ ಭಾರತೀಯ ಭಾಷೆ. ಉರ್ದುವಿನ ಹಂಗಿಲ್ಲದೆ ಭಾರತದ ಅನೇಕ ಮುಸ್ಲಿಮ್ ಸಮುದಾಯಗಳು ಅರಬ್ ಇಸ್ಲಾಮಿನ ಜತೆ ಗಾಢ ಸಂಬಂಧ ಹೊಂದಿವೆ. (ಕೇರಳದ ಮಾಪ್ಪಾ-ಬ್ಯಾರಿ ಸಮುದಾಯಗಳು ಹೆಚ್ಚು ಅರಬೀ ಕರಣಗೊಂಡ ಸಂಸ್ಕೃತಿಯನ್ನು ಹೊಂದಿವೆ. ಇದಕ್ಕೆ ಚಾರಿತ್ರಿಕ ಕಾರಣಗಳು ಬೇರೆ ಇವೆ.)

ಇನ್ನೊಂದು ಭಾಷೆಗೆ ಸಂಸ್ಕೃತಿಗೆ ಮುಕ್ತವಾಗಿ ತೆರೆದುಕೊಳ್ಳುವುದರಿಂದ, ತನ್ನ ಭಾಷೆ ಸಂಸ್ಕೃತಿಯ ವಿಶಿಷ್ಟತೆ ಕಳೆದುಹೋಗಬಹುದು ಎಂಬ ಅಳುಕಾದರೂ, ಇಡೀ ಅಲ್ಪಸಂಖ್ಯಾತ ಭಾಷಾಸಮುದಾಯಕ್ಕೆ ಆಗುತ್ತದೆ ಎನ್ನಲಾಗದು. ಬಹಳ ಸಲ ಈ ಆತಂಕ ಆ ಸಮುದಾಯದ ಪ್ರತಿಷ್ಠಿತ ಮಧ್ಯಮ ವರ್ಗದ್ದಾಗಿರುತ್ತದೆ. ಯಾವತ್ತೂ ಸಾಂಸ್ಕೃತಿಕ ಹಕ್ಕಿನ ಪ್ರಶ್ನೆಯನ್ನು ಮೊದಲು ಎತ್ತುವುದು ಪ್ರಜ್ಞೆಯುಳ್ಳ ಮಧ್ಯಮ ವರ್ಗಗಳೇ. ಅವುಗಳ ಆತಂಕ ಇಡೀ ಸಮುದಾ ಯದ ಬದುಕುವ ಹಕ್ಕಿನ ಆಯಾಮವನ್ನು ಪಡೆದುಕೊಂಡಾಗ, ಅದಕ್ಕೆ ವಿಶಾಲವಾದ ರಾಜ ಕೀಯ ಸಾಂಸ್ಕೃತಿಕ ನೆಲೆ ಒದಗುತ್ತದೆ. ಈ ಆತಂಕ ವರ್ಗಹಿತಾಸಕ್ತಿಯ ಸ್ವರೂಪದಲ್ಲಿದ್ದಾಗ ಸಂಕುಚಿತ ನೆಲೆಯಲ್ಲಿ ಬಿದ್ದಿರುತ್ತವೆ. ಆರ್ಥಿಕವಾಗಿ ಮುಂದುವರೆದ ಈ ವರ್ಗಗಳು, ಲೌಕಿಕ ಅಭಿವೃದ್ಧಿಗಾಗಿ ಇಂಗ್ಲೀಶಿಗೆ ತೆರೆದುಕೊಳ್ಳುವಾಗ ಈ ಅಳುಕನ್ನು ಅನುಭವಿಸುವುದಿಲ್ಲ. ಕರ್ನಾಟಕದ ಮಧ್ಯಮವರ್ಗದ ಉರ್ದುಭಾಷಿಕ ಮುಸ್ಲಿಮರಿಗೆ ಕನ್ನಡದ ಮೇಲೆ ಶಂಕೆ. ಇಂಗ್ಲೀಶ್ ಮೇಲೆ ಸೆಳೆತ. ಇದೊಂದು ವಸಾಹತುಶಾಹಿ ಆಳ್ವಿಕೆ ಬಿಟ್ಟುಹೋದ ವೈರುಧ್ಯ. ಆದರೆ ಯಾವತ್ತೂ ಬೆವರು ಸುರಿಸಿ ಬದುಕು ಮಾಡಬೇಕಾದ ವರ್ಗಗಳಿಗೆ ತಮ್ಮ ಭಾಷೆ- ಸಂಸ್ಕೃತಿಯ ರಕ್ಷಣೆ ಅಷ್ಟು ಕಾಡುವುದಿಲ್ಲ; ಅನ್ನ ಕೊಡುವ ಎಲ್ಲ ಭಾಷೆಗೆ ಅವು ತೆರೆದು

ಕೊಳ್ಳುತ್ತವೆ. ಇದು ಗುಣವೂ ಹೌದು; ಮಿತಿಯೂ ಹೌದು. ಗುಲಬರ್ಗಾ, ಬಿಜಾಪುರ, ರಾಯಚೂರು ಸೀಮೆಗಳಲ್ಲಿ ೧೮,೧೯,೨೦ನೇ ಶತಮಾನಗಳಲ್ಲಿ ಮೂಡಿದ ಸಾವಿರಾರು ಮುಸ್ಲಿಂ ಜನಪದ ಶಾಹಿರರು, ತತ್ವಪದಕಾರರು ಉರ್ದುವಿನ ಜತೆಯಲ್ಲೇ ಕನ್ನಡ, ಮರಾಠಿ, ತೆಲುಗುಗಳಲ್ಲಿ ಏಕಕಾಲಕ್ಕೆ ರಚನೆ ಮಾಡಿದರು. ಇವರಲ್ಲಿ ಮುಸ್ಲಿಮರಲ್ಲಿ ಕೆಳವರ್ಗದ ಪಿಂಜಾರ ಜಾತಗಾರ ಪಂಗಡಗಳಿಗೆ ಸೇರಿದವರು, ಕಠಿಣ ದುಡಿಮೆ ಮಾಡಿ ಬದುಕುವವರು, ಹಳ್ಳಿಗಾಡಿನವರು ಹಾಗೂ ಮೌಖಿಕ ಸಂಪ್ರದಾಯದವರು; ಅನ್ಯಭಾಷಿಕ ಪರಿಸರದೊಡನೆ ಬದುಕಲು ಸಂಪರ್ಕ ಮಾಡಲೇಬೇಕಾದ ಪರಿಸ್ಥಿತಿಗಳಲ್ಲಿ ಇದ್ದವರು.

## ಬಹುಭಾಷಿಕ ಕವಿಗಳು

ಕರ್ನಾಟಕದಲ್ಲಿ ಎರಡುಮೂರು ಭಾಷೆಗಳನ್ನು ಏಕಕಾಲಕ್ಕೆ ಆಡುವ ಸಮುದಾಯಗಳಿವೆಯಷ್ಟೆ. ಅದರಲ್ಲೂ ಎರಡು ಭಾಷಿಕ ರಾಜ್ಯಗಳ ಗಡಿಯಲ್ಲಿರುವ ಉರ್ದು ಮನೆಮಾತಿನ ಕುಟುಂಬಗಳು ಅನಿವಾರ್ಯವಾಗಿ ಬಹುಭಾಷಿಕವಾಗಿರುತ್ತವೆ. ಇದರ ಮುಂದುವರಿಕೆಯಾಗಿಯೇ ಬಹುಭಾಷಿಕ ಕವಿಗಳು ಇದ್ದಾರೆ. ಪ್ರಾಚೀನ ಕನ್ನಡದ ಕವಿಗಳಿಗೆ ಪ್ರಾಕೃತ ಸಂಸ್ಕೃತ ಗೊತ್ತಿದ್ದವು. ಕೆಲವೊಮ್ಮೆ ಪಾಂಡಿತ್ಯ ತೋರಿಸಲು ಪ್ರಾಕೃತದಲ್ಲಿ ಬಿಡಿಪದ್ಯ ಬರೆದು ಸೇರಿಸುವುದೂ ಇದೆ. ಆದರೆ ತಮಗೆ ಬೇಕಾದ ಪ್ರೇರಣೆಗಳನ್ನು ಈ ಭಾಷೆಗಳಲ್ಲಿ ಪಡೆಯುತ್ತ, ಇವರು ಬರೆದದ್ದು ಕನ್ನಡದಲ್ಲೇ. ಹಲವು ಭಾಷೆಗಳು ಗೊತ್ತಿರುವುದು ಬೇರೆ. ಅವನ್ನು ಬಳಸುತ್ತ ಸಾಂಸ್ಕೃತಿಕ ಕೊಡುಕೊಳೆ ಮಾಡುವುದೇ ಬೇರೆ. ೧೭,೧೮ನೇ ಶತಮಾನದ ಬಹುತೇಕ ಆಡಳಿತಗಾರರಿಗೆ (ಉದಾ: ಮುಮ್ಮಡಿ ಕೃಷ್ಣರಾಜನಿಗೆ) ಫಾರಸಿ ಗೊತ್ತಿತ್ತು. ಆದರೆ ರಾಜಕೀಯ ಬಳಕೆ ಮಾತ್ರವಾಗಿತ್ತದು. ಅನಂತರ ಕರ್ನಾಟಕದ ಅನೇಕ ಲೇಖಕರು ಫಾರಸಿಯಲ್ಲೂ ದಖನಿಯಲ್ಲೂ ಸಾಹಿತ್ಯರಚನೆ ಮಾಡಿದರು. ಫಾರಸಿ ಹಿಂಜರಿದ ಮೇಲೆ ಬರೀ ದಖನಿಯಲ್ಲಿ ಬರೆದರು. ಅನಂತರ ದಖನಿ ಜತೆ ಕನ್ನಡ, ಮರಾಠಿ, ತೆಲುಗುಗಳು ಸೇರಿಕೊಂಡವು. ಇದು ಭಾಷೆಯ ಸಾಂಸ್ಕೃತಿಕ ಬಳಕೆಯಾಗಿತ್ತು.

೧೭,೧೮,೧೯ನೇ ಶತಮಾನಗಳ ನೂರಾರು ಶಾಹಿರರು ಹಾಗೂ ತತ್ವಪದಕಾರರು ಸಾಮಾನ್ಯವಾಗಿ ಬಹುಭಾಷಿಕರು. ಹಾಗೆ ಕಂಡರೆ, ಈ ಕವಿಗಳು ಮಾಡಿರುವ ಎಲ್ಲಾ ಭಾಷೆಯ ರಚನೆಗಳು ಸಿಗುತ್ತಿಲ್ಲ. (ಉದಾ: ಶಿಶುನಾಳನ ಮರಾಠಿ, ತೆಲುಗು ರಚನೆಗಳು.) ಇವರ ಬಹುಭಾಷೆಗಳಲ್ಲಿ ಒಂದು ಮಾತೃಭಾಷೆ; ಉಳಿದವು ಪರಿಸರದ ಭಾಷೆಗಳು. ಕರ್ನಾಟಕ-ಆಂಧ್ರದ ಗಡಿಭಾಗದ ಕವಿಗಳು ಕನ್ನಡ ತೆಲುಗು(ಉರ್ದು)ಗಳಲ್ಲಿಯೂ, ಕರ್ನಾಟಕ ಮಹಾರಾಷ್ಟ್ರ ಗಡಿಭಾಗದ ಕವಿಗಳು ಕನ್ನಡ ಮರಾಠಿ(ಉರ್ದು)ಗಳಲ್ಲಿಯೂ ರಚನೆ ಮಾಡಿರುವರು. ಎರಡೂ ಕಡೆ ಜೋಡಿಭಾಷೆಗಳ ಜತೆ ಉರ್ದು ಬಂದು ಸೇರುತ್ತದೆ. ಬೀದರ್ ಗುಲಬರ್ಗಾ

ಸೀಮೆಯಲ್ಲಿ ಮಾತ್ರ ಕನ್ನಡ, ಉರ್ದು, ಮರಾಠಿ, ತೆಲುಗು - ಹೀಗೆ ೪ ಭಾಷೆಗಳಲ್ಲಿ ಏಕಕಾಲಕ್ಕೆ ರಚಿಸುತ್ತಿದ್ದ ಕವಿಗಳು ಸಿಗುತ್ತಾರೆ. ಈ ಬಹುಭಾಷಿಕತೆ ಉದ್ದೇಶ ಸಾಹಿತ್ಯಕ ಪ್ರೇರಣೆ ಪಡೆವುದಲ್ಲ. ಪ್ರಭುತ್ವವನ್ನು ಒಲೈಸುವುದಲ್ಲ, ತಂತಮ್ಮ ಎದುರುಗಡೆ ಇರುವ ಭಾಷಿಕ ಸಮುದಾಯಗಳ ಒತ್ತಾಸೆಗೆ ಸ್ಪಂದಿಸುವುದು. ಈ ಅರ್ಥದಲ್ಲಿ ಇವರು ನಿಜವಾಗಿಯೂ ಜನತೆಯ ಕವಿಗಳು. ಇಂಥ ಕೆಲವು ಕವಿಗಳ ವಿವರ ಹೀಗಿದೆ:

| ಹೆಸರು | ಕಾಲ(ಕ್ರಿ.ಶ.) | ಸೀಮೆ | ಬಳಸಿದ ಭಾಷೆಗಳು |
|---|---|---|---|
| ಕಾಡಸಿದ್ಧ | ೧೭-೧೮ | ಬೆಳಗಾವಿ | ಕ. ದಖನಿ |
| ಮಹಿಪತಿರಾಯ | ೧೭-೧೮ | ಬಿಜಾಪುರ | ಕ.ಉ.ಮ.ತೆ.ಫಾ. |
| ಕೊಡ್ಲೂರುಬಸವಲಿಂಗ | ೧೮-೧೯ | ರಾಯಚೂರು | ಕ.ಉ.ತೆ. |
| ಚನ್ನೂರಜಲಾಲಸಾಬ | ೧೮-೧೯ | ಗುಲಬರ್ಗಾ | ಕ.ಉ. |
| ತಿಂತಿಣಿ ಮೋನಪ್ಪ | ೧೭ | ಗುಲಬರ್ಗಾ | ಕ.ಉ |
| ಶಿಶುನಾಳ ಶರೀಫ | ೧೯ | ಗದಗ | ಕ.ಉ.ಮ.ತೆ |
| ನರೋಣದಹೈದರಲಿ | ೧೯ | ಗುಲಬರ್ಗಾ | ಕ.ಉ. |
| ಅರವಲಿ ಬಿಜಲಿ | ೧೯ | ರಾಯಚೂರು | ಕ.ಉ.ತೆ |
| ಭಂಭಂ ಬಾಬಾ | ೧೯ | ಬಳ್ಳಾರಿ | ಕ.ಉ.ತೆ |
| ಕಾಕಿಪೀರಾ | ೧೯ | ಗುಲಬರ್ಗಾ | ಕ.ಉ |
| ಸಾಲಗುಂದಿ ಗುರುಖಾದರಿ | ೧೯-೨೦ | ರಾಯಚೂರು | ಕ.ಉ.ತೆ |
| ಇಂಗಳಗಿ ಹಸನ | ೧೯-೨೦ | ಬಿಜಾಪುರ | ಕ.ಉ |
| ಮೋಟ್ನಳ್ಳಿ ಹಸನ | ೧೯-೨೦ | ಗುಲಬರ್ಗಾ | ಕ.ಉ.ತೆ |
| ನಿಡುವಂಚಿ ಭದ್ರೇಶ್ವರ | ೨೦ | ಬೀದರ | ಕ.ಉ.ಮ |
| ದೀನದಾರ ಚೆನ್ನಬಸವೇಶ್ವರ | ೨೦ | ಗುಲಬರ್ಗಾ | ಕ.ಉ.ಮ.ತೆ |
| ದೇಗಾವಿ ಹಜರತ | ೨೦ | ಗುಲಬರ್ಗಾ | ಕ.ಉ.ಮ |
| ಕೊಳ್ಳೂರ ಹಸನ | ೨೦ | ಬೀದರ | ಕ.ಉ.ಮ |
| ರಾಘವೇಂದ್ರರಾವ್ ಜಜ್ಬ್ | ೨೦ | ರಾಯಚೂರು | ಕ.ಉ. |
| ಮುದ್ದಣ್ಣಮಂಜರ್ | ೨೦ | ಗುಲಬರ್ಗಾ | ಕ.ಉ |

(ಕ=ಕನ್ನಡ; ಉ=ಉರ್ದು; ದ=ದಖನಿ; ತೆ=ತೆಲುಗು; ಮ=ಮರಾಠಿ)

## ಬಹುಭಾಷಿಕತೆಯಲ್ಲಿ ಅಧಿಕಾರಸ್ಥ ಭಾಷೆ

ದಕ್ಷಿಣದ ಮತ್ತು ಉತ್ತರ ಭಾರತದ ಉರ್ದುಗಳ ಹುಟ್ಟಿನಲ್ಲಿರುವ ಮುಖ್ಯ ವ್ಯತ್ಯಾಸ

ಇದು. ಉತ್ತರ ಭಾರತದ ಉರ್ದು ಫಾರಸಿ ಅರಬಿಗಳ ಜತೆ ಇಂಡೋ ಆರ್ಯನ್ ಭಾಷೆಗಳ ಸಹವಾಸದಲ್ಲಿ ಹುಟ್ಟಿತು. ಅರಬಿ ಫಾರಸಿಗಳ ಜತೆ ಮರಾಠಿಯಂಥ ಇಂಡೊ ಆರ್ಯನ್ ಹಾಗೂ ದ್ರಾವಿಡಭಾಷೆಗಳಾದ ಕನ್ನಡ ತೆಲುಗುಗಳ ಸಹವಾಸದಲ್ಲಿ ದಖಿನಿ ಉರ್ದು ಹುಟ್ಟಿತು. ಈಗಲೂ ದ್ರಾವಿಡ ಭಾಷೆಗಳ ಪರಿಸರದಲ್ಲಿ ದಖಿನಿಯು ಬದುಕಿದೆ. ಆದ್ದರಿಂದ ಉರ್ದು-ಹಿಂದಿ ಬಹುಭಾಷಿಕತೆಗಿಂತ ಉರ್ದು-ಕನ್ನಡ-ತೆಲುಗು ಬಹುಭಾಷಿಕತೆಯು ಹೆಚ್ಚು ಸಂಕೀರ್ಣವಾದುದು.

ಒಂದು ಪ್ರಧಾನ ಭಾಷೆಯಲ್ಲಿ ಸಾಹಿತ್ಯ ರಚಿಸುತ್ತ, ಅದು ಹಲವು ಭಾಷಿಕರಿಗೂ ತಲುಪಬೇಕು ಎಂಬ ಆಶಯವು ಕನ್ನಡದಲ್ಲಿ ಸಾಮಾನ್ಯ. ರತ್ನಾಕರವರ್ಣಿಯು ತನ್ನ ಕಾವ್ಯವನ್ನು "ಅಯ್ಯಯ್ಯಾ ಚೆನ್ನಾದುದನೆ ಕನ್ನಡಿಗರು,ರಯ್ಯಾ ಮಂಚಿದಿಯೆನೆ ತೆಲುಗರು, ಅಯ್ಯಯ್ಯ ಎಂಚ ಪೊರ್ಲಾಡೆಂದು ತುಳುವರು ಮೈಯುಬ್ಬಿ ಕೇಳು"ವಂತೆ ರಚಿಸುವುದಾಗಿ ಹೇಳಿಕೊಳ್ಳುತ್ತಾನೆ. ಕರ್ನಾಟಕದಲ್ಲಿ ತುಳು, ಉರ್ದು, ಕೊಂಕಣಿ, ಲಂಬಾಣಿ, ಕೊಡವ, ಮಾಪ್ಳಾ ಮುಂತಾದ ಮನೆಮಾತುಳ್ಳ ಲೇಖಕರು ಕನ್ನಡದಲ್ಲಿ ಬರೆಯುತ್ತಿದ್ದಾರೆ. ಕನ್ನಡವು ಈ ನಾಡಿನ ಪರಿಸರದ ಹಾಗೂ ಅಧಿಕಾರಸ್ಥ ಭಾಷೆಯಾಗಿರುವುದರಿಂದ ಇವರು ಕನ್ನಡವಲ್ಲಿ ಬರೆಯುವುದು ಸಹಜ. ಆದರೆ ಹೀಗೆ ಬರೆಯುವುದರ ಹಿಂದೆ ಅನೇಕ ರಾಜಕೀಯ ಒತ್ತಡಗಳಿವೆ. ಇದರಿಂದ ಅನೇಕ ಸಾಂಸ್ಕೃತಿಕ ತೊಡಕುಗಳು ಉಂಟಾಗುತ್ತಿವೆ. ಮೊದಲನೆದಾಗಿ ತಂತಮ್ಮ ಮನೆಮಾತುಗಳಲ್ಲಿ ಈ ಲೇಖಕರು ಯಾಕೆ ಬರೆಯುತ್ತಿಲ್ಲ ಎಂಬ ಪ್ರಶ್ನೆಯೇ ಎದ್ದಿಲ್ಲ. ಹೀಗಿರುವಾಗ ಕನ್ನಡ ಮನೆಮಾತಿನ ಲೇಖಕರು ತುಳು, ಉರ್ದು, ಮುಂತಾದ ಜನಭಾಷೆಗಳಲ್ಲಿ ಬರೆಯುವುದು ಕಲ್ಪನೆಗೂ ಸಾಧ್ಯವಿಲ್ಲ. ಕನ್ನಡ ಮನೆಮಾತಿನ ಲೇಖಕರು, ಇಂಗ್ಲೀಶಲ್ಲಿ ಪದ್ಯ-ಕತೆ ಬರೆದರೆ, ಅಸಹಜ ಅನಿಸುವುದಿಲ್ಲ. ಆದರೆ ತುಳು, ಕೊಡವ, ಉರ್ದು ಭಾಷಿಕ ಲೇಖಕರು ತಂತಮ್ಮ ಭಾಷೆಗಳಲ್ಲಿ ಬರೆದರೆ ಅಸಹಜವೆಂಬಂತಾಗಿದೆ. ಬಹುಭಾಷಿಕ ಪರಿಸರದಲ್ಲಿ ರಾಜಕೀಯವಾಗಿ ಬಲಿಷ್ಠ ಭಾಷೆ ಉಂಟುಮಾಡುವ ವೈರುಧ್ಯವಿದು. ಕನ್ನಡವಲ್ಲದ ಭಾಷೆಗಳಲ್ಲಿ ಹೆಚ್ಚಿನ ಸಾಹಿತ್ಯ ಸೃಷ್ಟಿಯು ಇನ್ನೂ ಜಾನಪದ ಪರಂಪರೆಯಲ್ಲೇ ಇದೆ. ಒಂದರ್ಥದಲ್ಲಿ ಇದೊಂದು ಭಾಗ್ಯ ಕೂಡ. ಯಾಕೆಂದರೆ ಮೌಖಿಕ ಕವಿಗಳು ಲಿಖಿತ ಪರಂಪರೆಯ ಲೇಖಕರಂತೆ ತಮ್ಮ ಓದುಗ ಲೋಕ ಹಾಗೂ ಪ್ರಕಟಣ ವ್ಯವಸ್ಥೆ ಬಗ್ಗೆ ತಲೆ ಕೆಡಿಸಿಕೊಳ್ಳುವಂತಿಲ್ಲ. ತಮ್ಮ ರಚನೆಗೂ ಕೇಳುಗಲೋಕಕ್ಕೂ ಹೆಚ್ಚಿನ ಬಿರುಕುಗಳಿಲ್ಲದೆ, ಅವರು ಇನ್ನು ಸಮುದಾಯದ ಭಾಗವಾಗಿಯೇ ಇದ್ದಾರೆ. ಆದರೆ ಅತ್ಯಂತ ಆಧುನಿಕ ಸಂವೇದನೆಗಳನ್ನು ವ್ಯಕ್ತಮಾಡುವುದು ಈ ಪರಂಪರೆಗೆ ಕಷ್ಟಕರವಾಗುತ್ತದೆ.

ವಿಭಿನ್ನ ಮನೆಮಾತಿನ ಲೇಖಕರು, ತಂತಮ್ಮ ಭಾಷೆಗಳಲ್ಲಿ ಬರೆಯದಿರಲು ಕನ್ನಡ, ಉರ್ದು-ಇಂಗ್ಲೀಶಿಗಿರುವಂತೆ, ಪ್ರಕಟಣ ವ್ಯವಸ್ಥೆ, ಓದುಗಲೋಕಗಳು ಇಲ್ಲದಿರುವುದು

ನಿಜವಾದ ಕಾರಣವೆ? ಅಥವಾ ಈ ಲೇಖಕರು ತಮ್ಮ ಭಾಷೆಗಳಲ್ಲಿ ಬರೆಯದಿರುವುದರಿಂದ ಆ ಸೌಲಭ್ಯಗಳು ಸೃಷ್ಟಿಯಾಗುತ್ತಿಲ್ಲವೊ? ಈ ಪ್ರಶ್ನೆಗೆ ಉತ್ತರ ಸರಳವಾಗಿಲ್ಲ.

ಈಗೀಗ ಕರ್ನಾಟಕದ ತುಳು, ಕೊಂಕಣಿಗಳಲ್ಲಿ ಬರವಣಿಗೆ- ಪ್ರಕಟಣೆ ಶುರುವಾಗಿದೆ. ಸದ್ಯಕ್ಕೆ ಹೆಚ್ಚಿನ ಲೇಖಕರು ತಮ್ಮ ಭಾಷೆಯಲ್ಲೇ ಕಾಣಿಸಬಹುದಾಗಿದ್ದ ಸಾಂಸ್ಕೃತಿಕ ಲೋಕ ವನ್ನು ತಮ್ಮ ಮನೆಮಾತಲ್ಲದ ಭಾಷೆಯಲ್ಲಿ, ಆದಷ್ಟೂ ಅಭಿವ್ಯಕ್ತಿ ಮಾಡುವ ಒತ್ತಾಯಕ್ಕೆ ಬಿದ್ದಿದ್ದಾರೆ. ಉದಾ: ಬ್ಯಾರಿ ಭಾಷಿಕ ಲೇಖಕರು ಕನ್ನಡದ ಓದುಗರಿಗಾಗಿ ಬರೆಯುವಾಗ, ಅಲ್ಲಲ್ಲಿ ತಮ್ಮ ಸಮುದಾಯದ ಪಾತ್ರಗಳ ಮೂಲಕ ಭಾಷೆಯನ್ನೋ ಅದಕ್ಕೆ ಹತ್ತಿರದ ಅನುವಾದವನ್ನೋ ತರುತ್ತಿದ್ದಾರೆ. ಬೋಳುವಾರು, ಅಬ್ದುಲ್ ರಶೀದ್, ಕಟ್ಪಾಡಿ ಅವರ ಕತೆ ಕಾದಂಬರಿಗಳಲ್ಲಿ ಇದನ್ನು ಗುರುತಿಸಬಹುದು. ಕುಂವಿಯಂಥ ಲೇಖಕರು ತೆಲುಗು-ಉರ್ದು ಭಾಷಿಕ ಪಾತ್ರಗಳು ತಂತಮ್ಮ ಭಾಷೆಗಳಲ್ಲೇ ಮಾತಾಡುವ ಪ್ರಯೋಗ ಮಾಡುತ್ತಾರೆ. ಇದು ಸಂದರ್ಭದ ನೈಜತೆಗಾಗಿಯೋ ಶೈಲಿಯ ವೈವಿಧ್ಯಕ್ಕಾಗಿಯೋ ಬಂದಿರಬಹುದು. ಆದರೆ ಬಹಳ ಸಲ ವಿನೋದಕ್ಕಾಗಿ ಬರುತ್ತದೆ. ಯಾಕೆಂದರೆ ಕೃತಿ ಉದ್ದಕ್ಕೂ ಪಾತ್ರಗಳು ತಮ್ಮ ಭಾಷೆಗಳಲ್ಲಿ ಮಾತಾಡುವುದಿಲ್ಲ. ಗುಲ್ವಾಡಿಯವರ 'ಇಂದಿರಾಬಾಯಿ' (೧೮೯೯) ಕಾದಂಬರಿ ಯಲ್ಲಿ ಮಾತ್ರ, ತುಳು-ಕೊಂಕಣಿ ಪಾತ್ರಗಳು ತಂತಮ್ಮ ಭಾಷೆಗಳಲ್ಲೇ ಮಾತಾಡುವ ಶೈಲಿ ಇದೆ. ಕನ್ನಡದ ಮೊದಲ ಬಹುಭಾಷಿಕ ರಚನೆಯಿದು. ಬಹುಭಾಷಾ ಪ್ರಯೋಗ ಕತೆ-ಕಾದಂಬರಿ ಗಳಲ್ಲಿ ಮಾಡುವಂತೆ, ಕಾವ್ಯದಲ್ಲಿ ಮಾಡಲಾಗುತ್ತಿಲ್ಲ ಎಂಬುದನ್ನು ಗಮನಿಸಬೇಕು. ಆದರೆ ಜನಪದ ಕವಿಗಳು ತತ್ವಪದಕಾರರು ತಮ್ಮ ಪದ್ಯಗಳಲ್ಲಿ ಇದನ್ನು ಮಾಡಿತೋರಿಸಿದರು. ಲೇಖಕರು ತಮ್ಮ ತಾಯ್ನುಡಿ ಅಲ್ಲದ ಭಾಷೆಗಳಲ್ಲಿ ಬರೆಯುತ್ತ, ತಮ್ಮ ಭಾಷೆಗಳ ಸಾಂಸ್ಕೃತಿಕ ನೆನಪು ಅಲ್ಲಿ ಆದಷ್ಟು ಅವತರಿಸುವಂತೆ ಮಾಡಲು, ಮೂರು ಬಗೆಗಳಲ್ಲಿ ಯತ್ನಿಸುವುದನ್ನು ಕಾಣಬಹುದು:

೧) ಆಯಾ ಭಾಷಿಕರಿಗೆ ಅವರವರ ಭಾಷೆಗಳಲ್ಲಿ ರಚನೆ ಮಾಡುವುದು.

೨) ಪ್ರಧಾನ ಭಾಷೆಯೊಂದನ್ನು ಆರಿಸಿಕೊಂಡು ಅದರೊಳಗೆ ಹಲವು ಭಾಷೆಗಳು ಸಂದರ್ಭಕ್ಕೆ ತಕ್ಕಂತೆ ಬೆರೆತು ಬರುವಂತೆ ರಚಿಸುವುದು.

೩) ಒಂದೇ ಭಾಷೆಯ ರಚನೆಯಲ್ಲಿ ಹಲವು ಭಾಷೆಯ ಪದ, ನುಡಿಗಟ್ಟು, ವಾಕ್ಯಗಳು, ಬೇರೆ ಬೇರೆಯಲ್ಲ ಎಂಬಂತೆ ಸಹಜವಾಗಿ ನೆಲೆಸುವಂತೆ ಮಾಡುವುದು.

ಮೊದಲನೇ ವಿಧಾನದಲ್ಲಿ ಭಾಷೆಗಳು ಬೆರೆಯುವ ಅವಕಾಶ ಕಡಿಮೆ ಇರುತ್ತವೆ. ಉರ್ದು-ಕನ್ನಡ, ಇಂಗ್ಲೀಶ್ -ಕನ್ನಡ, ತುಳು- ಕನ್ನಡಗಳಲ್ಲಿ ಬರೆಯುತ್ತಿರುವ ಲೇಖಕರು ಇಲ್ಲಿ ಬರುತ್ತಾರೆ. ಆದರೆ ಶಂಬಾ ಮತ್ತು ಬೇಂದ್ರೆ ಮರಾಠಿ ಹಾಗೂ ಕನ್ನಡಗಳೆರಡರಲ್ಲೂ ಬರೆವಾಗ

ಒಂದು ಭಾಷೆಯ ಸಾಂಸ್ಕೃತಿಕ ನೆನಪುಗಳನ್ನು ಮತ್ತೊಂದರಲ್ಲಿ ತರಬಲ್ಲವರಾಗಿದ್ದರು. ಶಿಲ್ಪಪ್ಪ ಎಂಬ ಬೀದರ್ ಭಾಗದ ಕವಿ ಮರಾಠಿ ಅಭಂಗ ಮತ್ತು ವಚನಗಳು ಸ್ಮೃತಿಗಳನ್ನು ಕನ್ನಡ ಮರಾಠಿ ಮಿಶ್ರಿತ ರಚನೆಗಳಲ್ಲಿ ತರುತ್ತಾನೆ. ಉರ್ದು ಗಜಲುಗಳಿಂದ ಕಲಿತು ಕನ್ನಡ ಗಜಲುಗಳನ್ನು ರಚಿಸುವಾಗಲೂ ಇಂಥದು ಆಗಬಹುದು.

ಎರಡನೇ ವಿಧಾನದಲ್ಲಿ ಒಂದೇ ರಚನೆ ಹಲವು ಭಾಷೆಗಳನ್ನು ಒಳಗೊಂಡಿರುತ್ತದೆ. ಇದು ಮೇಲುನೋಟಕ್ಕೆ ಒಮ್ಮೊಮ್ಮೆ ಉದ್ದೇಶಪೂರ್ವಕ ಅನಿಸುವುದುಂಟು. ಆದರೆ ಅದರೊಳಗೆ ಹಲವು ಭಾಷೆಗಳನ್ನು ಮನ್ನಿಸುವ ಡೆಮಾಕ್ರಟಿಕ್ ಗುಣವೊಂದು ಇರುತ್ತದೆ. 'ಇಂದಿರಾಬಾಯಿ' ಕಾದಂಬರಿಯಲ್ಲಿ ತುಳು ಕೊಂಕಣಿಗಳು ಹೀಗೆ ವಾಸ್ತವಾದಿ ಶೈಲಿಯ ಭಾಗವಾಗಿ ಬರುತ್ತವೆ. ಕೆಳವರ್ಗದ ಪಾತ್ರಗಳು ಸಂಸ್ಕೃತ ಬಳಸಬಾರದೆಂಬ ನಾಟ್ಯಶಾಸ್ತ್ರದ ನಿಷೇಧಿಸಿದ್ದರಿಂದ ಸಂಸ್ಕೃತ ನಾಟಕಗಳಲ್ಲಿ ಪ್ರಾಕೃತ ಬರುತ್ತದೆ. ಇದು ಡೆಮಾಕ್ರಟಿಕ್ ಗುಣದಿಂದ ಬಂದದ್ದಲ್ಲ. ಸಾಮಾಜಿಕ ಭೇದ ಕಾಪಾಡಿಕೊಳ್ಳುವುದಕ್ಕಾಗಿ ಬಂದಿದ್ದು. ಮುಸ್ಲಿಮರನ್ನು ಚಿತ್ರಿಸುವಾಗ ಉರ್ದು ಮಾತುಕತೆ ತರುವ ಅನೇಕ ಕನ್ನಡ ಕೃತಿಗಳಲ್ಲಿ (ಉದಾ: 'ಕಂಠೀರವ ನರಸರಾಜ ವಿಜಯ') ಮತ್ತೊಂದು ಭಾಷೆಯ ಅಸ್ತಿತ್ವ ಮನ್ನಿಸುವ ಗುಣವಿಲ್ಲ. ಇವರು ಸಾಂಸ್ಕೃತಿಕವಾಗಿ ಬೇರೆ ಯೆಂದು ತೋರಿಸುವ ಗುಣವಿದೆ.

ಮೂರನೇ ವಿಧಾನವೆಂದರೆ, ಏಕಕಾಲಕ್ಕೆ ಒಂದು ರಚನೆಯಲ್ಲಿ ಭೇದಭಾವವಿಲ್ಲದೆ ಹಲವು ಭಾಷೆಗಳು ಕುಟುಂಬದ ಸದಸ್ಯರಂತೆ ಬಂದು ನೆಲೆಸುವುದು. ಈ ವಿಧಾನ ಕೇವಲ ಲೇಖಕರ ಪ್ರಯೋಗಶೀಲತೆಗೆ ಸಂಬಂಧಿಸಿದ್ದಲ್ಲ. ಅದು ಬಹುಭಾಷಿಕ ಪರಿಸರದ ಪರಿಣಾಮವಾಗಿರು ವಂಥದ್ದು. ಕನ್ನಡದ ಜತೆ ಉರ್ದು, ತೆಲುಗು, ಮರಾಠಿ, ತಮಿಳು, ತುಳು, ಕೊಂಕಣಿ, ಕೊಡವ, ಇಂಗ್ಲೀಶ್ ಮುಂತಾದ ಭಾಷಿಕ ಲೋಕಗಳು ಬೆರೆಯುವ ಅಥವಾ ಈ ಎಲ್ಲ ಭಾಷಿಕ ಲೋಕಗಳಲ್ಲಿ ಕನ್ನಡ ಹೊರಳಾಡಿಬರುವ ಪರಿಯು, ಅನೇಕ ವೈವಿಧ್ಯಗಳನ್ನು ಸೃಷ್ಟಿಸಿದೆ. ಹಾಗೆ ಕಂಡರೆ, ಈ ಬಹುಭಾಷಿಕ ಬೆರಕೆಯು ಮಾತಾಡುವ ಸಂದರ್ಭದಲ್ಲಿ ಇರುವಷ್ಟು ಬರಹದಲ್ಲಿ ಕಾಣಿಸಿಕೊಂಡಿಲ್ಲ. ಇದಕ್ಕೆ ಕಾರಣ, ಬರಹವು ಪ್ರಾಮಾಣಿಕೃತ ಶೈಲಿಯಲ್ಲಿ ಪ್ರಕಟವಾಗಬೇಕಾದ ಒತ್ತಡಕ್ಕೆ ಸಿಕ್ಕುಬಿದ್ದಿರುವುದು. ಹೀಗಾಗಿ ನಿಸಾರ್ ಅಹಮದ್ ಅವರ ಕಾವ್ಯದಲ್ಲಿ ಉರ್ದು ಮಿಶ್ರಿತ ಕನ್ನಡವು ಕವಿಯ ಪ್ರಯೋಗಶೀಲತೆಯಂತೆಯೇ ಭಾಸ ವಾಗುತ್ತದೆ.

ಆದರೆ ಈ ಒತ್ತಡಗಳನ್ನು ಕರ್ನಾಟಕದ ಮೌಖಿಕ ಪರಂಪರೆಯ ರಚನೆಗಳು ಅದ್ಭುತವಾಗಿ ಮೀರುತ್ತವೆ. ಯಾಕೆಂದರೆ ಭಾಷಾಸಂಕರವೆಂಬುದು ಬಹುಭಾಷಿಕ ಸಮುದಾಯಗಳ ಪಾಲಿಗೆ ಪ್ರಯೋಗವಲ್ಲ.ಸಂವಹನಕ್ಕೆ ತೊಡಕಲ್ಲ. ಶಿಶುನಾಳ ಶರೀಫ, ಮೋಟ್ನಳ್ಳಿ ಹಸನಸಾಬ, ತಿಂತಿಣಿ ಮೋನಪ್ಪ, ಕಾಡಸಿದ್ದೇಶ್ವರ ಮುಂತಾದವರ ರಚನೆಗಳಲ್ಲಿ ಕನ್ನಡ - ಉರ್ದು

ಬೆರೆತುಬರುವುದು, ಪರಿಸರದ ಅಪೇಕ್ಷೆ ಮತ್ತು ಪ್ರತಿಫಲನ ಆಗಿವೆ.

ಖುಷಿ ಏನು ಮಾಡಿದ ' ಈ ಕೂಸು ಮಠದಾಗ ಆವಾಜ್ ಮಾಡ್ಲತ್ತದ.
ಈ ಕೂಸಿಗಿ ಖತಂ ಮಾಡ್ತೆನಾ' ಅಂತ ಹೇಳಿ ಕಲ್ಲು ಎತ್ತಿದ.

ಬೀದರ್ ಭಾಗದ ಜನಪದ ಕತೆಯೊಂದರಲ್ಲಿ, ಒಬ್ಬ ಖುಷಿಗೂ ಮತ್ತು ಶಿವನಿಗೂ ನಡೆವ ಸಂಭಾಷಣೆ ಇದು. ಇಲ್ಲಿ ಖತಂ, ಆವಾಜ್ ಎಂಬ ಶಬ್ದಗಳು ಫಾರಸಿಯವಾದರೂ, ಅವು ಸಾಂಸ್ಕೃತಿಕ ನೆನಪುಗಳ ಸಮೇತ ಭಾಗವಹಿಸುತ್ತಿವೆ ಅನಿಸುತ್ತಿಲ್ಲ. ಗುಲಬರ್ಗಾ- ಬೀದರ್ ಭಾಷೆಯಲ್ಲಿ ಬರುವ ಮರಾಠೀ ಸಂಖ್ಯಾವಾಚಕಗಳೂ ಹೀಗೆ ಸಾಂಸ್ಕೃತಿಕ ಪೊರೆ ಕಳಚಿದ ವ್ಯವಹಾರ ಸಹಜ ಶಬ್ದಗಳು. ಆದರೆ ತಿಂತಿಣಿ ಮೋನಪ್ಪ, ಶಿಶುನಾಳ ಉರ್ದು-ಫಾರಸಿ ಶಬ್ದಗಳನ್ನು ಅವುಗಳ ಸಾಂಸ್ಕೃತಿಕ ನೆನಪುಗಳ ಸಮೇತ ಕರೆಯುತ್ತಾರೆ.

ಏಕಲಾಕ ಐಸೀಹಜಾರ ಪಾಂಚೋಪೀರ ಪೈಗಂಬರ್
ಜಿತಾಪೀರ್ ಮೌನುದ್ದೀನ್ ಕಾಶೀಪತಿ ಹರಹರ ಮಹಾದೇವ

ಏಕಲಾಕ ಐಸೀಹಜಾರ (ಒಂದು ಲಕ್ಷದ ಎಂಬತ್ತುಸಾವಿರ) ಎಂಬುದು ಸಂಖ್ಯೆಯನ್ನು ಸೂಚಿಸುವ ಲೆಕ್ಕವಲ್ಲ. ಇಷ್ಟು ಜನ ಪ್ರವಾದಿಗಳು ಜಗತ್ತಿನಲ್ಲಿ ಈ ಹಿಂದೆ ಆಗಿಹೋಗಿದ್ದಾರೆ ಎಂಬ ಇಸ್ಲಾಮಿಕ್ ಪುರಾಣದ ನಂಬಿಕೆಯನ್ನು ಸೂಚಿಸುತ್ತಿದೆ. ಅವರಲ್ಲಿ ಮಹಮದ್ ಪೈಗಂಬರನೂ ಒಬ್ಬ. ಇದೇ ಸಾಲಿನಲ್ಲಿ ಮೋನಪ್ಪನೂ ಒಬ್ಬ ಎಂಬ ಬಹುತ್ವ ತತ್ವವನ್ನು ಪ್ರತಿಪಾದಿಸುತ್ತಿದೆ. ನಜೀರ್ ಅಕ್ಬರಾಬಾದಿ ಎಂಬ ಸೂಫೀ ಕವಿಯ ವಿಷಯದಲ್ಲಿ ಹೀಗಾಯಿತು. ಆತ ತನ್ನ ಉರ್ದು ರಚನೆಗಳಲ್ಲಿ ಬ್ರಜಭಾಷೆಯ ಪದಗಳನ್ನು ಬೆರೆಸತೊಡಗಿದ ಅಥವಾ ಹಾಗೆ ಬೆರೆತಿರುವ ಭಾಷೆಯನ್ನು ಎತ್ತಿ ಬಳಸತೊಡಗಿದ. ಫಾರಸಿ ಭೂಯಿಷ್ಠ ಉರ್ದು ಭಾಷೆ ಬಳಸುತ್ತಿದ್ದ ಕವಿಗಳೆಲ್ಲ ಇದನ್ನು ತುಚ್ಛವಾಗಿ ನೋಡತೊಡಗಿದರು. ಯಾಕೆಂದರೆ ನಜೀರ್ ಬ್ರಜಭಾಷೆಯ ಜತೆಗೆ ಆಭಾಷೆಯಲ್ಲಿದ್ದ ಇಡೀ ಜನಪದ ನಂಬಿಕೆಗಳ ಜಗತ್ತನ್ನೇ ತನ್ನ ಕಾವ್ಯದೊಳಗೆ ಆಹ್ವಾನಿಸಿ ಬಿಟ್ಟಿದ್ದ. ತಾತ್ವಿಕವಾಗಿ ಆ ಜಗತ್ತು ಬಹುದೇವತಾರಾಧಕವಾದುದಾಗಿತ್ತು. ಧರ್ಮದ ನಿಯಮಗಳನ್ನು ನಿತ್ಯ ಬದುಕಿನಲ್ಲಿ ಸಂತೋಷಕ್ಕಾಗಿ ಉಲ್ಲಂಘಿಸಿಬಿಡುವ ಸಮುದಾಯಗಳ ಉತ್ಕಟತೆಯ ಸೃಷ್ಟಿಯಾಗಿತ್ತು. ಇದರಿಂದಲೇ ಸನಾತನವಾದಿಗಳಿಗೆ ಅಪ್ರಿಯವಾದುದಾಗಿತ್ತು. ಉರ್ದುವನ್ನು ಫಾರಸೀ - ಅರಬಿಗಳಿಂದ ತುಂಬಿಬಿಡುತ್ತಿದ್ದ ನಜೀರನ ಸಮಕಾಲೀನ ಕವಿಗಳು, ಚಿತ್ರವೊಂದನ್ನು ಸೃಷ್ಟಿಸಬೇಕಾದರೆ ತಮ್ಮ ಪರಿಸರಕ್ಕೆ ಕೈಹಾಕುತ್ತಿರಲಿಲ್ಲ. ಗಿಡವೆಂದರೆ ಸರು, ಹೂವೆಂದರೆ ನರ್ಗೀಸ್, ಹಕ್ಕಿಯೆಂದರೆ ಬುಲ್‌ಬುಲ್, ಪ್ರೇಮವೆಂದರೆ ಲೈಲಾಮಜನೂ- ಹೀಗೆ ಎಲ್ಲಕ್ಕೂ ಪರ್ಶಿಯಾ ದೇಶಕ್ಕೆ ಹೋಗುತ್ತಿದ್ದರು- ಹಿಂದಿಯನ್ನು ಸಂಸ್ಕೃತದಿಂದ ತುಂಬುವ ಎಷ್ಟೋ ಕವಿಗಳು ಗತಕಾಲದ ವೈದಿಕ ಸನಾತನಕ್ಕೆ

ಹೋಗುವಂತೆ. ಗಮನಿಸಬೇಕಾದ ಸಂಗತಿಯೆಂದರೆ, ಒಂದು ಭಾಷೆಯ ‘ ಮೂಲ’ ಅಥವಾ ಪಾವಿತ್ರ್ಯವನ್ನು ಉಳಿಸಬೇಕು ಎಂದು ಬಯಸುವವರೆಲ್ಲ, ಹೇಗೋ ಧಾರ್ಮಿಕ ಮೂಲಭೂತ ವಾದಿಗಳಾಗಿ ಬಿಡುವುದು; ಬಹುಭಾಷಿಕ ಪರಿಸರದ ಬೆರಕೆಯನ್ನು ಒಪ್ಪುವವರೆಲ್ಲ ಸೆಕ್ಯುಲರ್ ಆಗಿಬಿಡುವುದು; ಹೀಗಾಗಿ ಭಾಷಿಕ ಸಂಕರಕ್ಕೆ ಭಾಷೆಯಾಚೆಯ ಅನೇಕ ಮೈಗಳಿವೆ. ಆದರೆ ಯಾವಾಗಲೂ ಭಾಷಾ ಬೆರಕೆಯು ಸಾಂಸ್ಕೃತಿಕ ಸಂಕರದ ಗುರುತಾಗಿ ಇರಬೇಕಾಗಿಲ್ಲ. ಉರ್ದು-ಫಾರಸಿ ಶಬ್ದ ಬಳಕೆ ಮಾಡಿಯೂ ಅವುಗಳ ಸಾಂಸ್ಕೃತಿಕ ನೆನಪಿಗೆ ಹೋಗದಿರುವ ಸಾಧ್ಯತೆ ಇದೆ. ಇಷ್ಟಾದರೂ ಒಬ್ಬ ವ್ಯಕ್ತಿ ಏಕಭಾಷಿಕನಾಗಿದ್ದೂ ಬಹುಸಂಸ್ಕೃತಿಯ ಪರವಾಗಿರಬಹುದು. ಅಥವಾ ಬಹುಭಾಷಿಕನಾಗಿದ್ದೂ ಅದರ ಏಕ ಸಂಸ್ಕೃತಿವಾದಿಯಾಗಿರಬಹುದು. ಇದನ್ನು ನಿರ್ಧರಿಸುವುದು ಅವನ ಸಾಮಾಜಿಕ-ಆರ್ಥಿಕ ಪರಿಸರವೇ ವಿನಾ ಭಾಷೆಯಲ್ಲ. ಸಂಚಾರಿ ವ್ಯಾಪಾರಿಗಳು ಹಾಗೂ ಧರ್ಮ ಪ್ರಚಾರಕರು ಸಾಮಾನ್ಯವಾಗಿ ಬಹುಭಾಷಿಕರಾಗಿರುತ್ತಾರೆ. ಆದರೆ ಬಹುಸಾಂಸ್ಕೃತಿಕತೆಯನ್ನು ಪ್ರತಿನಿಧಿಸುವವರಲ್ಲ. ಬೆರೆವ ಭಾಷೆಗಳು ಸಮಾನ ಸಂಸ್ಕೃತಿಯನ್ನು ಪಡೆದಿದ್ದಾಗ ಕೂಡ ಬಹುಭಾಷಿಕತೆ ಬಹುಸಾಂಸ್ಕೃತಿಕತೆ ನಿರ್ಮಿಸುವದಿಲ್ಲ. ಉದಾ: ಕೆ.ಜಿ.ಎಫ್. ಭಾಗದ ತಮಿಳು-ತೆಲುಗು-ಕನ್ನಡ ಪರಿಸರವು, ಗುಲಬರ್ಗಾದ ಕನ್ನಡ-ಉರ್ದು-ಮರಾಠಿ ಪರಿಸರದ ಪರಿಣಾಮಗಳನ್ನು ಸೃಷ್ಟಿಸಿಲ್ಲ.

ಉರ್ದು-ಫಾರಸಿಗಳ ಜತೆ ಕನ್ನಡವು ಮಾಡಿದ ಒಡನಾಟಗಳ ಬಗ್ಗೆ ಸಾಕಷ್ಟು ಮಾಹಿತಿ ಸಿಗುತ್ತದೆ. ಅಚ್ಚರಿಯ ಮಾತೆಂದರೆ, ಬಹುಭಾಷಿಕ ಪರಿಸರದಲ್ಲಿದ್ದೂ ಅಲ್ಲಿನ ಭಾಷೆಗಳನ್ನು ಅವಾಹನೆ ಮಾಡದ ಕನ್ನಡದ ರಚನೆಗಳು ಇರುವುದು. ಉದಾ: ವಾಸ್ತು- ಆಚರಣೆಗಳಲ್ಲಿ ಇಸ್ಲಾಮಿನ ಗಾಢ ಪ್ರಭಾವ ಪಡೆದಿರುವ ಕೊಡೇಕಲ್ಲ ಪರಂಪರೆಯು, ತನ್ನ ಸಾಹಿತ್ಯದಲ್ಲಿ ದಖನಿ-ಫಾರಸಿಗಳನ್ನು ಹಠಪೂರ್ವಕರಾಗಿ ದೂರವಿಟ್ಟಿದೆ. ೧೭, ೧೮ ನೇ ಶತಮಾನಗಳ ಇನ್ನೂ ಅನೇಕ ರಚನೆಗಳಲ್ಲಿನ ಅನ್ಯಭಾಷಾ ಪ್ರತಿರೋಧಗಳು ಅಚ್ಚರಿ ತರುತ್ತವೆ. ಅದರಲ್ಲೂ ಧಾರ್ಮಿಕ-ಆನುಭಾವಿಕ ರಚನೆಗಳಲ್ಲಿ ಭಾಷಾಶುದ್ಧತೆಯ ಮನೋಭಾವ ಕೆಲಸ ಮಾಡಿದೆ. ಅನೇಕ ಅನುಭಾವಿಗಳು ಕನ್ನಡದಲ್ಲಿ ಹಿಂದಿನಿಂದ ಬಂದ ಪರಿಭಾಷೆಯನ್ನು ಬಳಸಿಯೇ ರಚನೆ ಮಾಡುತ್ತಾ ಹೋಗಿದ್ದಾರೆ. ಅನುಭಾವಿ ಸಾಹಿತ್ಯಕ್ಕೆ ಕನ್ನಡದಲ್ಲಿ ಶ್ರೀಮಂತ ಪರಂಪರೆಯಿರು ವುದು ಇದಕ್ಕೆ ಕಾರಣವಿರಬಹುದೇ? ಅವರ ಕಾಲದ ರಾಜಕೀಯ ಪರಿಸ್ಥಿತಿ, ಇಸ್ಲಾಮಿಗಿದ್ದ ಅಧಿಕಾರಸ್ಥ ಗುಣ, ದಖನಿಗಿದ್ದ ಪ್ರತಿಷ್ಠೆಗಳು ಇವರಿಗೆ ಒಡನಾಟ ಮಾಡಲು ತಕ್ಕನಾಗಿರ ಲಿಲ್ಲವೇ? ಅಥವಾ ಪದ್ಯ ರಚನೆಯಲ್ಲಿ ಪರಂಪರಾಗತ ಶೈಲಿ ಬಳಸುವ ಅನಿವಾರ್ಯತೆ ಬಂತೆ?

೧೮,೧೯,೨೦ನೇ ಶತಮಾನದ ತತ್ವಪದಕಾರರು ಹಾಗೂ ಜನಪದ ಕವಿಗಳು ಈ ಕಾರಣ ಕ್ಕಾಗಿ ತುಂಬಾ ಮುಖ್ಯರಾಗುತ್ತಾರೆ. ಇವರು ಅವರವರ ಮತಗಳ ಕೆಳಸ್ತರಕ್ಕೆ ಸೇರಿದವರು.

ಕಡ್ಡಾಯವಾಗಿ ಹಳ್ಳಿಗಾಡಿನವರು. ಬಿಜಾಪುರ ಗುಲಬರ್ಗಾದಂಥ ಶಹರಿನವರಲ್ಲ. ದುಡಿಯುವ ವರ್ಗದವರು. ಕೆಲವರಂತೂ ಜೀತಗಾರರು. ಕೆಲವರು ಗಾಂವಠಿ ಶಾಲೆಯ ಶಿಕ್ಷಕರು. ಇವರ ರಚನೆಗಳಲ್ಲಿ ಉಂಟಾಗಿರುವ ಭಾಷಾ ಬೆರಕೆಯು ಇವರ ಔದಾರ್ಯದಿಂದಲೊ ಪ್ರಯೋಗತನ ದಿಂದಲೊ ಬಂದದ್ದಲ್ಲ. ಅನಿವಾರ್ಯತೆಯಿಂದ ಸಹಜವಾಗಿ ಬಂದಿದ್ದು. ಈ ಅನುಕೂಲವು ಬಾಯಿಪರಂಪರೆಯ ಕವಿಗಳಿಗೆ ಹೆಚ್ಚು. ಕರ್ನಾಟಕದ ಕಿನ್ನರಿ ಜೋಗಿಗಳು ಅರ್ಜುನ ಜೋಗಿಯ ಹಾಡನ್ನು ಕೇಳುಗರ ಭಾಷೆಗೆ ತಕ್ಕಂತೆ ತಟ್ಟನೆ ಬದಲಿಸಿ ತೆಲುಗು,ಕನ್ನಡ, ಮರಾಠಿ, ಉರ್ದುಗಳಲ್ಲಿ ಹಾಡುತ್ತಾರೆ. ಅನೇಕ ಭಾಷಿಕರು ನೆರೆದ ಸಭೆಯಲ್ಲಿ ಲಾವಣಿಕಾರರು ಕೂಡ ಬೇಕಾದ ಭಾಷೆಗೆ ನೆಗೆದು ಹಾಡುತ್ತಾರೆ. ಜನತೆಯ ಕವಿಗಳಲ್ಲಿ ಸಮುದಾಯದ ಅಪೇಕ್ಷೆ ಈಡೇರಿಸುವುದಕ್ಕಾಗಿ ಬಹುಭಾಷಿಕತೆ ಹೀಗೆ ಬರುತ್ತದೆ.

## ಬಹುಭಾಷಿಕತೆ - ಬಹುಸಾಂಸ್ಕೃತಿಕತೆ

ಬಹುಭಾಷಿಕತೆಯು ಯಾವುದೋ ಒಂದು ಸಂಸ್ಕೃತಿಯ ಯಜಮಾನಿಕೆಯ ಬದಲಾಗಿ, ಸೆಕ್ಯುಲರ್ ಮತ್ತು ಡೆಮಾಕ್ರೆಟಿಕ್ ಆದ ಒಂದು ಬಹುರೂಪಿ ಸಂಸ್ಕೃತಿಯೊಂದಕ್ಕೆ ಅವಕಾಶ ಮಾಡಿಕೊಡುತ್ತದೆಯೇ? ಕನ್ನಡ ಮತ್ತುಉರ್ದು ಭಾಷೆಗಳಲ್ಲಿ ಪದಕಟ್ಟಿದ ಜನಪದ ಕವಿ ಹಾಗೂ ತತ್ವಪದಕಾರರನ್ನು ಗಮನಿಸಬೇಕು. ಇವರ ರಚನೆಗಳಲ್ಲಿ ಮುಖ್ಯ ಸಂಗತಿಯೆಂದರೆ, ಪುರಾಣಗಳ ಮರುಸೃಷ್ಟಿ.

ಕನ್ನಡ-ಉರ್ದು-ತೆಲುಗು ಭಾಷೆಗಳಲ್ಲಿರುವ ಮೊಹರಂ ಪದಗಳ ವಸ್ತು ಅರಬ ದೇಶದ ಮಹಮ್ಮದ್ ಪೈಗಂಬರ್, ಅಳಿಯ ಮೌಲಾಲಿ, ಮೊಮ್ಮಕ್ಕಳಾದ ಹಸನ್ - ಹುಸೇನರ ಯುದ್ಧ ಮತ್ತು ಸಾವುಗಳ ಚರಿತ್ರೆ. ಈ ಚರಿತ್ರೆಯು ಭಾರತೀಯ ಭಾಷೆಗಳಲ್ಲಿ ಪುನರ್ ನಿರ್ಮಾಣವಾಗುವಾಗ ಪಡೆಯುವ ರೂಪಾಂತರಗಳು ಕುತೂಹಲಕರ. ಇಸ್ಲಾಮಿನ ಚರಿತ್ರೆಯು ಭಾರತೀಯ ಭಾಷೆಯಾದ ಉರ್ದುವಿನೊಳಗೆ ವ್ಯಕ್ತವಾಗುವಾಗಲೇ ರೂಪಾಂತರಕ್ಕೆ ಒಳಗಾಗು ತ್ತದೆ. ಇನ್ನು ತೆಲುಗು-ಕನ್ನಡದೊಳಗೆ ಪ್ರಕಟವಾಗುವಾಗ, ಆ ಭಾಷೆಗಳ ಸ್ಮೃತಿಗಳನ್ನು ಬಳಸ ಬೇಕಾಗುತ್ತದೆ. ಕನ್ನಡ ಮೊಹರಂ ಪದಗಳಲ್ಲಿ ಶಿವ ಶಂಭು ಶರಣ ಕಾಶಿ ಭೂತಾಯಿ ಮುಂತಾದ ಶಬ್ದ ಬಳಕೆಯನ್ನು, ಧಾರ್ಮಿಕ ಸಾಮರಸ್ಯದ ಫಲವೆಂದರೆ ಸರಳೀಕರಿಸಿದಂತಾಗುತ್ತದೆ. ದೂರದೇಶದ ಚರಿತ್ರೆ- ಪುರಾಣಗಳನ್ನು ಕಣ್ಣೆದುರಿನ ಜೀವನದ ಚಿತ್ರಗಳಲ್ಲಿ ಕಟ್ಟಿಕೊಡಬೇಕಾದ ಅನಿವಾರ್ಯತೆಯಲ್ಲಿ ಇನ್ನೂ ಸೂಕ್ಷ್ಮವಾದ ಸಾಂಸ್ಕೃತಿಕ ಪಲ್ಲಟಗಳಾಗುತ್ತವೆ. ೧೦ ದಿನಗಳ ಮೊಹರಂ ಹಬ್ಬದ ಖತಲ್ (ಕೊಲೆ) ಅಭಿನಯಗಳು ಶಿಶುನಾಳನಿಗೆ ವಿಜಯದಶಮಿಯನ್ನೂ ಅಸುರಮರ್ದನವನ್ನೂ ನೆನಪಿಸುತ್ತವೆ. ಅರಬ್ ಪುರಾಣಗಳಲ್ಲಿ ಕಲಿತನದ ಸಂಕೇತವಾದ ಮೌಲಾಲಿಯ ಗರ್ವವು, ಒಬ್ಬ ಬಡಕಲು ಮುದುಕಿಯ ಹಣ್ಣಿನ ಬುಟ್ಟಿಯನ್ನು ಎತ್ತಲಾಗದೆ

ನಾಶವಾಗುವ ಪ್ರಸಂಗವಿದೆ. ಈ ಕುರಿತು ಪದಕಟ್ಟುವ ಜನಪದ ಕವಿಗೆ, ಹನುಮಂತನ ಬಾಲ ಎತ್ತಹೋದ ಭೀಮನಿಗೆ ಗರ್ವಭಂಗವಾಗುವ ಪುರಾಣ ಪ್ರೇರೇಪಿಸುತ್ತದೆ. ಇಸ್ಮಾಯಿಲನನ್ನು ದೇವರಿಗೆ ಬಲಿಕೊಡುವ ಪ್ರಸಂಗವು ಭಕ್ತಸಿರಿಯಾಳನ ಕತೆಯ ಮೂಲಕ ಮೈದಳೆಯುತ್ತದೆ. ಈ ಎಲ್ಲಾ ಪುರಾಣ ಪ್ರಸಂಗಗಳು ಸಮುದಾಯಕ್ಕೆ ಮುಖ್ಯವಾಗುವುದು, ಅವುಗಳ ಒಳಗಿನ ಮಾನವೀಯ ದುರಂತ - ಸಂತೋಷಗಳಿಂದಾಗಿ. ಬಹುಭಾಷಿಕ ಕವಿಗಳು ಹಲವು ಭಾಷಿಕ ಸಮುದಾಯಗಳಿಗಾಗಿ ರಚನೆ ಮಾಡುವಾಗ, ಪುರಾಣ - ಚರಿತ್ರೆಗಳನ್ನು ವಿಚಿತ್ರವಾಗಿ ಬೆರಸಿ ಬಿಡುತ್ತಾರೆ.

ಇದರ ಮುಂದಿನ ಭಾಗವೆಂದರೆ, ಕವಿಗಳು ತಂತಮ್ಮ ಧರ್ಮಗಳ ಮೂಲಭೂತ ತಾತ್ವಿಕ ಗ್ರಹಿಕೆಗಳನ್ನು ಬಿಟ್ಟುಕೊಡುವ ಹಂತಕ್ಕೆ ಹೋಗುವುದು. ಸ್ಥಳೀಯ ದೈವಗಳನ್ನು ಪುರಾಣಗಳನ್ನು ತೆಕ್ಕೆಗೆ ತೆಗೆದುಕೊಂಡು ಹುಟ್ಟುವ ಈ ರಚನೆಗಳು, ಹೇಗೋ ಬಹುದೇವತಾರಾಧನೆಯತ್ತ ಚಲಿಸಿಬಿಡುತ್ತವೆ. ಇದಕ್ಕೆ ಕಾರಣ ಆಯಾ ಕವಿಗಳ ಧರ್ಮದ್ರೋಹವಲ್ಲ. ಸ್ಥಳೀಯ ಭಾಷೆಗಳಲ್ಲಿ, ಆಯಾ ಭಾಷಿಕ ಸಮುದಾಯಗಳ ಅಪೇಕ್ಷೆಯನ್ನು ಮನಸ್ಸಲ್ಲಿಟ್ಟುಕೊಂಡು ಪದರಚನೆ ಮಾಡಬೇಕಾದ ಪರಿಸ್ಥಿತಿ, ಈ ಬಗೆಯ ದಾಟುವಿಕೆಯನ್ನು ಮಾಡಿಸುತ್ತದೆ. ಬಹುಭಾಷಿಕತೆ ಹೀಗೆ ಬಹುರೂಪಿ ಸಂಸ್ಕೃತಿ ರೂಪತಳೆಯುವುದಕ್ಕೆ ಹಿನ್ನೆಲೆಯಾಗುತ್ತದೆ.

## ಬಹುಭಾಷಿಕ ಸಂಸ್ಕೃತಿಯ ಮಹತ್ವ

ಬಹುಭಾಷಿಕ ಪರಿಸರದ ಪರಿಣಾಮಗಳಲ್ಲಿ ಒಂದಾದ ಬಹುರೂಪಿ ಸಂಸ್ಕೃತಿಯು ಸ್ವರೂಪದಲ್ಲಿ ಉರ್ದುವಿನಂತೆ ಇದೆ. ಹೇಗೆ ಉರ್ದು ಹಲವು ಭಾಷೆಗಳು ಕೂಡಿ ಆಯಿತೋ ಹಾಗೇ ಇದು. ಉರ್ದುವಿನ ಮೂಲ ತಳವು ಇಂಡೋ ಆರ್ಯನ್ ಭಾಷೆಗಳದ್ದು, ಆದರೂ ಅದು ಅರಬಿ, ಫಾರಸಿ, ದ್ರಾವಿಡ ಮುಂತಾದ ಅನೇಕ ಭಾಷಾ ಕುಟುಂಬಗಳಿಂದ ಶಬ್ದಸ್ವೀಕಾರ ಮಾಡಲು ಬೇಕಾದ ಮೇಲು ರಚನೆಪಡೆದಿದೆ. ಬಹುಭಾಷಿಕಸಂಸ್ಕೃತಿಯ ಸ್ವಭಾವದಲ್ಲೂ ನಿರಾಕರಿಸುವ ಗುಣಕ್ಕಿಂತ ಸ್ವೀಕಾರದ ಗುಣ ಹೆಚ್ಚು. ಇದು 'ದೇವರು ಒಬ್ಬನೇ ಅಲ್ಲವೇ' ? ಎಂದರೆ ಉತ್ತರ ಹೌದೆನ್ನುತ್ತದೆ. ಹಾಗಾದರೆ ಇಟಪುರೀಶನನ್ನೋ, ಸಾವಳಗಿ ಶಿವಲಿಂಗನನ್ನೋ ನಂಬಿದರೆ 'ಮೂಲ ನಂಬಿಕೆಯ ಗತಿಯೇನು? ' ಎಂದರೆ, ' ಇಬ್ಬರು ಜೊತೆಗೆ ಇದ್ದರೆಏನು ಕೇಡು?.' ಎನ್ನುತ್ತದೆ.

ಬಹುಭಾಷಿಕ - ಬಹುಸಾಂಸ್ಕೃತಿಕ ರಚನೆಗಳಲ್ಲಿ ಪ್ರತಿರೋಧಿಸುವ ಗುಣ ಇಲ್ಲವೆಂದಲ್ಲ. ಅವು ಸನಾತನವಾದವನ್ನು ತೀವ್ರವಾಗಿ ವಿರೋಧಿಸುತ್ತವೆ. ಬದಲಿಗೆ ದುಡಿಯುವ ವರ್ಗದ ಬದುಕಿಗೆ ಬೇಕಾದ ಮೌಲ್ಯಗಳನ್ನು ಅವು ರೂಪಿಸುತ್ತವೆ. ಆದರೆ ಬಹುಭಾಷಿಕ ಸಂಸ್ಕೃತಿಯು ತಾನು ನೆಲೆಸಿರುವ ಪ್ರದೇಶಗಳಲ್ಲಿ ನಿಜವಾಗಿಯೂ ದುಡಿಯುವ ವರ್ಗವನ್ನು ಧರ್ಮ

ಜಾತಿಗಳಾಚೆ ಹೋಗಿ ಬಂಧಿಸುವ ಕೆಲಸ ಮಾಡಿದೆಯೇ? ೧೯೪೮ರ ಹೊತ್ತಿಗೆ ಹೈದ್ರಾಬಾದ್-ಕರ್ನಾಟಕದಲ್ಲಿ ಉಂಟಾದ ರಜಾಕಾರರ ಹಾವಳಿ(ಪೋಲಿಸ್ ಆಕ್ಷನ್)ಗಳ ಪರಿಣಾಮವಾಗಿ ಸಮಾಜದಲ್ಲಿ ಕೋಮುಭಾವನೆ ತೀವ್ರವಾಗಿ ಕಾಣಿಸಿಕೊಂಡಿತು. ರಕ್ತಪಾತವೂ ಆಯಿತು. ಆ ಹೊತ್ತಲ್ಲಿ ಇಲ್ಲಿನ ದುಡಿಯುವ ವರ್ಗದ ಸಮುದಾಯಗಳು ತಮ್ಮನ್ನು ಛಿದ್ರಮಾಡಿಕೊಳ್ಳದೆ ಉಳಿಯಲು ಈ ಸಂಸ್ಕೃತಿ ಎಷ್ಟು ಮತ್ತು ಹೇಗೆ ಕಾರಣವಾಯಿತೋ ತಿಳಿಯಬೇಕಿದೆ.

## ಬಹುಭಾಷಿಕ ರಚನೆಗಳ ಸಮಸ್ಯೆ

ಬಹುಭಾಷಿಕ ಸಂಸ್ಕೃತಿಗಳಲ್ಲಿ ತನ್ನದು ಪ್ರತ್ಯೇಕ, ಅನನ್ಯ ಎಂಬ ವಾದಕ್ಕೆ ಬಹಳ ಮಹತ್ವವಿಲ್ಲ.ಇದೊಂದು ರೀತಿಯಲ್ಲಿ ಸಾಂಸ್ಕೃತಿಕ ಸಮಾಜವಾದಿ ವ್ಯವಸ್ಥೆ. ಹೀಗಾಗಿ ತನ್ನದೇ ಸರಿ ಎಂಬ ಹಠದ ಸನಾತನವಾದಕ್ಕೆ ಅವಕಾಶ ಕಡಿಮೆ. ಮೌಖಿಕ ನೆಲೆಯ ಜಾನಪದ ಮತ್ತು ಅನುಭಾವಿ ರಚನೆಗಳಲ್ಲಿ ಇದನ್ನು ಗಮನಿಸಬಹುದು. ಪ್ರಶ್ನೆಯೆಂದರೆ, ಈ ಔದಾರ್ಯವು ತಾನೇ ಒಂದು ದೋಷವಾಗಬಹುದೇ?

ಸಮಾಜದ ಪ್ರತಿಷ್ಠಿತ ವರ್ಗಗಳು ಯಜಮಾನಿಕೆಯ ದನಿಯಲ್ಲಿ ಹುಟ್ಟುಹಾಕುವ ಅಧಿಕೃತ ಸಂಸ್ಕೃತಿಯಲ್ಲಿ ಪ್ರವೇಶ ಪಡೆಯಲಾಗದ ವರ್ಗಗಳಿಗೆ,ಬಹುಭಾಷಿಕ ಬಹುಸಾಂಸ್ಕೃತಿಕ ರೂಪಗಳು ಪರ್ಯಾಯವಿದ್ದಂತೆ.ಉದಾ: ಫಾರಸಿ,ಅರಬಿ ಪರಂಪರೆಯಲ್ಲಿ ಕಾಲಿಡಲಾಗದ ಕನ್ನಡ-ಉರ್ದು-ತೆಲುಗು ಲಾವಣಿಕಾರರು ಹಾಗೂ ತತ್ವಪದಕಾರರು, ಮುಸ್ಲಿಮರಲ್ಲಿ ಕೆಳಸ್ತರಕ್ಕೆ ಸೇರಿದವರು. ಬಹುಭಾಷಿಕ ಪರಿಸರದಲ್ಲಿ ಮೂಡಿ ಬರುವ ಈ ಸಂಸ್ಕೃತಿ ತನ್ನ ಉದಾರತೆಯ ಕಾರಣಕ್ಕೆ ಜನಪ್ರಿಯವಾಗುತ್ತದೆ, ನಿಜ. ಆದರೆ ಹಕ್ಕುದಾರರಿಲ್ಲದ ಸಮಸ್ಯೆ ಅದಕ್ಕೆ ಬಂದು ಬಿಡುತ್ತದೆ. ಅದು ಹುಟ್ಟುವಾಗ ಇದ್ದ ಪರಿಸರ ಮುಂದುವರೆಯದಿದ್ದರೆ, ಕೇಳುವವರಿಲ್ಲದ ಮಗುವಾಗಿ ಬಿಡುತ್ತದೆ. ಮೂಲಭೂತವಾದಕ್ಕೆ ಸಮೀಪವಿರುವ ಸಾಂಸ್ಕೃತಿಕ ರಚನೆಗಳಿಗೆ ಸಿಗುವ ಸಾಂಸ್ಥಿಕ ಬೆಂಬಲ ಇದಕ್ಕೆ ಸಿಗುವುದಿಲ್ಲ. ಬಹುಭಾಷಿಕ ಕವಿ ಮೋಟ್ನಳ್ಳಿ ಹಸನ್ ಸಾಬನ ಬದುಕಿನಲ್ಲಿ ನಡೆದ ಒಂದು ಪ್ರಸಂಗ ಸಾಂಕೇತಿಕವಾಗಿದೆ. ತನ್ನ ಊರಿನ ವೀರಭದ್ರ ದೇವರ ಗುಗ್ಗಳ ಪೂಜೆಗೆ ಹಸನ್‌ಸಾಬನು ಹೋದಾಗ, 'ಈ ಭವಿಯೇಕೆ ಇಲ್ಲಿ 'ಎಂದು ವೀರಶೈವರು ಹೊರಹಾಕುತ್ತಾರೆ. ಅದೇ ಕಾಲಕ್ಕೆ ಮುಸ್ಲಿಮರು 'ಇವನು ಕಾಫಿರರಂತೆ ಬದುಕುತ್ತಿದ್ದಾನೆ' ಎಂದು ನಿಜಾಮನಿಗೆ ದೂರು ಕೊಡುತ್ತಾರೆ. ಗುಗ್ಗಳವು ಆರಿ ಹೋದಾಗ ವೀರಶೈವರು ಹಸನ್‌ಸಾಬನನ್ನು ಕರೆಸಿಕೊಂಡು ಕ್ಷಮೆ ಕೇಳಿದಾಗ, ಗುಗ್ಗಳ ಮತ್ತೆ ಹತ್ತಿ ಉರಿಯಿತಂತೆ; ನಿಜಾಮನು ಹಸನ್‌ಸಾಬರ ಮಹಿಮೆಯನ್ನು ಕಂಡು ಮನ್ನಿಸಿದನಂತೆ -ಎಂದು ಈ ಕತೆಗಳು ಮುಗಿಯುತ್ತವೆ. ಆದರೂ ಈ ಪ್ರಸಂಗಗಳು ಬಹುಭಾಷಿಕ - ಬಹುಧಾರ್ಮಿಕ ಆಕೃತಿಗಳು ಎದುರಿಸುವ ಮುಖ್ಯ ಸಮಸ್ಯೆಯನ್ನು ಸೂಚಿಸುತ್ತಿವೆ.

ಬಹುಭಾಷಿಕ ರಚನೆಗಳ ಶಕ್ತಿ ಮತ್ತು ದೌರ್ಬಲ್ಯವೆಂದರೆ, ಒಂದಕ್ಕೆ ಅಂಟಿಕೊಳ್ಳದೆ ಹಲವನ್ನು ಒಪ್ಪುವ ಸಡಿಲ ಉದಾರವಾದ. ಉದಾ: ಬಳ್ಳಾರಿ ಸೀಮೆಯ ಭಂಭಂ ಪಂಥದವರು ಹಾಗೂ ಗುಲಬರ್ಗಾ ಸೀಮೆಯ ದೀನದಾರ ಚನ್ನಬಸವಣ್ಣ ಸಮಾಜದವರು ಬಹುಭಾಷೆಗಳಲ್ಲಿ ಕೃತಿ ರಚನೆ ಮಾಡುವವರು. ಎಲ್ಲ ಪ್ರವಾದಿಗಳನ್ನು ಎಲ್ಲ ಧರ್ಮ ಗ್ರಂಥಗಳನ್ನು ಆದರಿಸುವವರು. ಆದರೆ ಇವರನ್ನು ಸನಾತನವಾದ ಮುಸ್ಲಿಮರು 'ಬೇಇಸ್ಲಾಮಿ' ಎನ್ನುತ್ತಾರೆ. ಕೆಲವು ಲಿಂಗಾಯತರು ಇವರನ್ನು ಮತಾಂತರ ಮಾಡುವ ಮಿಶನರಿಗಳೆಂದು ಶಂಕಿಸುತ್ತಾರೆ. ಯಾವ ಮೂಲಭೂತವಾದಿಗಳೂ ತಮ್ಮವರೆಂದು ನಂಬದ ಈ ಪಂಥದವರು, ವಿಚಿತ್ರವಾಗಿ ಏಕಾಕಿಗಳು. ಸಾಧಾರಣ ಪರಿಸ್ಥಿತಿಯಲ್ಲಿ ಈ ಬಹುಭಾಷಿಕ-ಬಹುಸಾಂಸ್ಕೃತಿಕ ರಚನೆಗಳು ಆದರ್ಶ ರೂಪಿಯಾಗಿ ತೋರುತ್ತವೆ. ಒಂದು ಭಾಷಿಕ - ಧಾರ್ಮಿಕ ಸಮುದಾಯವು ಎದುರಾಳಿಯ ಆಕ್ರಮಣಕ್ಕೆ ಈಡಾದಾಗ, ತನ್ನ ಐಡೆಂಟಿಟಿಗಳನ್ನು ಹುಡುಕುತ್ತಾ ಒಗ್ಗೂಡುವ ಒತ್ತಡಕ್ಕೆ ಒಳಗಾಗುತ್ತದೆ. ಒಂದು ಭಾಷೆ, ಒಂದು ಧರ್ಮ, ಒಂದು ಸಮುದಾಯ ಎಂಬ ಸಮೀಕರಣವು ಆತ್ಮರಕ್ಷಣೆಯ ಅಗತ್ಯವಾಗಿ ಬಿಡುತ್ತದೆ. ಆಗ ಈ ಬಹುಭಾಷಿಕತೆಯ ಉದಾರತೆ ಅನುಪಯುಕ್ತ ಎನಿಸುತ್ತದೆ. ಬಹುಶ: ವ್ಯಕ್ತಿಗಳು, ಸಣ್ಣಪುಟ್ಟ ಗುಂಪುಗಳು, ಬಹುಭಾಷಿಕ ಸಂಸ್ಕೃತಿಯನ್ನು ಬದುಕುವುದು ಸುಲಭ. ಆದರೆ ದೀರ್ಘಕಾಲದ ಬದುಕಿನಲ್ಲಿ ಚಾರಿತ್ರಿಕ ಸಂಘರ್ಷಗಳು ಏರ್ಪಟ್ಟಾಗ, ಸಮುದಾಯಗಳು ಏಕಭಾಷಿಕವಾಗುವತ್ತ ನಡೆದುಬಿಡುತ್ತವೆ. ಬಹುಭಾಷಿಕ ಸಂಸ್ಕೃತಿಗಳು ಏಕಭಾಷಾವಾದಿ ಸಂಘರ್ಷಗಳಲ್ಲಿ ನಲುಗಿ ಹೋಗುತ್ತವೆ. ಯಾಕೆಂದರೆ ಭಾಷಿಕ ಜಗಳಗಳು ಕೇವಲ ಭಾಷಿಕವಾಗಿರುವುದಿಲ್ಲ. ಉರ್ದುವಿನ ಪ್ರಕರಣ ಬಂದಾಗಲೆಲ್ಲ ಕನ್ನಡಪರ ಹೋರಾಟಗಳಲ್ಲಿ ಎಂದೂ ಭಾಗವಹಿಸದ, ಆಳದಲ್ಲಿ ಸಂಸ್ಕೃತವಾದಿಗಳಾದ ಕೋಮುವಾದಿಗಳು ಚಕ್ಕನೆ ರಂಗ ಪ್ರವೇಶ ಮಾಡುತ್ತಾರೆ. ನಗರ ಮಧ್ಯಮ ವರ್ಗಕ್ಕೆ ಬೇಗ ಅಮರಿಕೊಳ್ಳುವ ಕಾಯಿಲೆಯೆಂದರೆ ಕೋಮುವಾದ. ತನ್ನ ಸಂಸ್ಕೃತಿಯ ಬೇರುಗಳನ್ನು ಕಳೆದುಕೊಂಡು ಆಧುನಿಕಗೊಂಡಿರುವ ಈ ವರ್ಗಕ್ಕೆ ತನ್ನ 'ಮೂಲಸಂಸ್ಕೃತಿ'ಗೆ ಮರಳಿ ಹೋಗಬೇಕೆನ್ನುವ ಸೆಳೆತ ಬರುತ್ತದೆ. ಆಗ ಅದು ತನ್ನ ಭಾಷೆ- ಧರ್ಮಗಳ ವಿಷಯದಲ್ಲಿ ಮೂಲಭೂತವಾದಿಯಾಗುತ್ತದೆ. ಅನ್ಯ ಭಾಷೆ ಧರ್ಮ ಸಂಸ್ಕೃತಿಗಳ ಹಗೆತನದಲ್ಲಿ ತನ್ನತನದ ವ್ಯಾಖ್ಯೆಯನ್ನು ಹುಟ್ಟಿಸುತ್ತದೆ. ಇನ್ನೊಂದು ಕಡೆ ಅಲ್ಪಸಂಖ್ಯಾತ ಸಮುದಾಯಗಳು, ತಮ್ಮ ಅಸ್ತಿತ್ವದ ಬಿಕ್ಕಟ್ಟು ಬಂದಾಗ ಭಾಷೆ ಮತ್ತು ಧರ್ಮದ ಗುರುತುಗಳ ಕೆಳಗೆ ಒಗ್ಗೂಡುತ್ತವೆ. ತಮ್ಮ ಆರ್ಥಿಕ- ರಾಜಕೀಯ ಸ್ವಾಯತ್ತತೆಗಾಗಿ ಹೋರಾಡುವಾಗ ಈ ಗುರುತುಗಳನ್ನು ಮುಂದಿಡುತ್ತವೆ. ಅನ್ಯಭಾಷೆ- ಸಮುದಾಯಗಳನ್ನು ನಂಬದ ಮನಸ್ಥಿತಿಯನ್ನು ಬೆಳೆಸಿಕೊಳ್ಳುತ್ತವೆ.

೯೦ರ ದಶಕದಿಂದ ಶುರುವಾಗಿರುವ ಜಾಗತೀಕರಣದ ಪರಿಣಾಮಗಳು ಸಮುದಾಯಗಳನ್ನು ಅನೇಕ ಆರ್ಥಿಕ ಸಂಕಟಗಳಿಗೆ ದೂಡಲಿವೆ. ದೂರದಿಂದಲೇ ಎಲ್ಲವನ್ನು ನಿಯಂತ್ರಿಸುವ ಜಾಗತಿಕ ಬಂಡವಾಳವು, ಕಣ್ಣಿಗೆ ಕಾಣದಂತೆ ನಿಂತು ಕಷ್ಟಗಳನ್ನು ಹುಟ್ಟಿಸುವ ಮಾಯಾವಿ

ಯಾಗಿದೆ. ಅದರ ಒತ್ತಡಗಳಿಂದ ಜನಹಿತಕ್ಕಾಗಿ ಕೆಲಸ ಮಾಡಬೇಕಾದ ಸರ್ಕಾರಗಳು, ತಮ್ಮ ಸಾರ್ವಜನಿಕ ಹೊಣೆಗಾರಿಕೆಯಿಂದ ಹಿಂಜರಿಯುವಂತಾಗಿದೆ. ಇಂಥಾ ಹೊತ್ತಲ್ಲಿ ಸಮುದಾಯಗಳು ತಂತಮ್ಮ ಭಾಷೆ- ಮತಗಳ ಹೆಸರಲ್ಲಿ ಒಂದಾಗಿ, ಅನ್ಯ ಭಾಷೆ ಧರ್ಮಗಳ ಸಮುದಾಯವೇ ತನ್ನ ಕಷ್ಟಗಳಿಗೆ ಕಾರಣ ಎಂದು ತಪ್ಪು ತಿಳುವಳಿಕೆ ಬೆಳೆಸಿಕೊಳ್ಳುವ ಸಾಧ್ಯತೆ ಮತ್ತಷ್ಟು ಹೆಚ್ಚಾಗಿದೆ. ತನ್ನ ಮೇಲೆ ಜನರ ಗಮನ ಬಾರದಂತೆ ಮಾಡಲು ಆಳುವ ವರ್ಗಗಳು ಇಂಥ ತಪ್ಪು ತಿಳುವಳಿಕೆಯನ್ನು ಬೆಳೆಸುವ ಸಾಧ್ಯತೆಯೂ ಇದೆ. ಬ್ರಿಟೀಶರು ಈ ಕೆಲಸವನ್ನು ಚೆನ್ನಾಗಿ ಮಾಡಿದರು. ಈಗಿನ ಆಳುವವರೂ ಇದನ್ನು ಮಾಡುತ್ತಿದ್ದಾರೆ. ಜತೆಗೆ ಜಾಗತೀಕರಣದ ಮುಖ್ಯ ಲಕ್ಷಣವೆಂದರೆ, ತನ್ನ ಮಾರುಕಟ್ಟೆ ಆರ್ಥಿಕ ನೀತಿಗೆ ಸಹಾಯಕವಾಗುವ ಒಂದು ಭಾಷೆಯನ್ನು ಹರಡುವುದು. ಹೀಗಾಗಿ ಕೂಡ ಬಹುಭಾಷಿಕ ಪರಿಸರವು ಮುಂಬರುವ ದಿನಗಳಲ್ಲಿ ಕೆಟ್ಟ ಒತ್ತಡಕ್ಕೆ ಸಿಲುಕಲಿದೆ. ಕನ್ನಡದಂಥ ದೀರ್ಘಕಾಲದ ಚರಿತ್ರೆಯುಳ್ಳ ದೊಡ್ಡ ಸಂಖ್ಯೆಯ ಭಾಷಿಕರು ಇರುವ ಭಾಷೆಗಳ ಮಾತಿರಲಿ; ಇನ್ನೂ ವಿಕಾಸದ ಹಾದಿಯಲ್ಲಿರುವ, ಬರೆಹ ಪರಂಪರೆಗೆ ಬಾರದ ಮತ್ತು ಪಂಪ ಬಸವಣ್ಣ ಕುವೆಂಪು ಅವರಂಥ ದೊಡ್ಡ ಲೇಖಕರ ಭಾಗ್ಯವನ್ನು ಕಾಣದ ಭಾಷೆಗಳು ಏನಾಗುತ್ತವೆ ಎಂಬುದನ್ನು ಯೋಚಿಸಲು ಕಷ್ಟವಾಗುತ್ತಿದೆ.

## ‘ನನಗ ಕನಡಾ ಬರುವುದಿಲ್ಲ’

ಒಂದು ನಾಡಿನ ಬಹುಭಾಷಿಕ ಪರಿಸರವು ಮೂಲತಃ ಒಬ್ಬಿಬ್ಬರ ಇಷ್ಟಾನಿಷ್ಟಗಳ ಫಲವಲ್ಲ. ಅದು ಒಂದು ಚಾರಿತ್ರಿಕ ಸಂಭವ. ಅದರ ಇರುವಿಕೆ- ಅಳಿವಿಕೆಗಳು ಸಮುದಾಯಗಳ ಬದುಕಲ್ಲಿ ನಡೆಯುವ ಆರ್ಥಿಕ - ರಾಜಕೀಯ ಪಲ್ಲಟಗಳನ್ನು ಅವಲಂಬಿಸಿವೆ. ಪ್ರಶ್ನೆಯೆಂದರೆ, ಭಾರತ ದಂಥ ಬಹುರೂಪೀ ದೇಶದಲ್ಲಿ ಈ ಪರಿಸರವು, ಸಮುದಾಯಗಳನ್ನು ಹೇಗೆ ಅಗಲಿಸುತ್ತದೆ ಮತ್ತು ಕೂಡಿಸುತ್ತದೆ ಎಂಬುದು; ಬಹುಭಾಷಿಕ ಪರಿಸರ ರಕ್ತಪಾತಕ್ಕೂ ಕಾರಣವಾಗಿದೆ. ಸಾಂಸ್ಕೃತಿಕ ಸಿರಿವಂತಿಕೆಗೂ ಕಾರಣವಾಗಿದೆ. ಮೊಹರಂ ಹಾಡುಗಳು, ನಮ್ಮ ಜನಪದ ಲಾವಣಿಕಾರರು, ತತ್ವಪದಕಾರರು, ಇಂಥ ಸಿರಿವಂತಿಕೆಯ ಸಾಕ್ಷ್ಯಗಳು. ಆದರೆ ‘ಇಲ್ರಿಯಪ್ಪ’ ಕತೆಯಲ್ಲಿ ಬರುವ ಪ್ರಸಂಗವು ಇದರ ಕೇಡಿನ ಮುಖವಾಗಿದೆ. ಅಲ್ಲಿ ಇಬ್ಬರು ಮನುಷ್ಯರು ಒಂದು ಭಾಷೆಯ ಮೂಲಕ ಪರಸ್ಪರ ಅರ್ಥಮಾಡಿಕೊಳ್ಳಲಾಗದ ವಿಷಮಸ್ಥಿತಿ ಏರ್ಪಟ್ಟಿದೆ. ಈ ಸ್ಥಿತಿಗೆ ಭಾಷೆಯಷ್ಟೇ ಕಾರಣವಲ್ಲ. ಅಧಿಕಾರಿಯ ಅಧಿಕಾರ ಮತ್ತು ಬಂಡಿಯವನ ಬಡತನ ಕೂಡ ಕಾರಣ. ಒಂದು ವೇಳೆ ಬಂಡಿಯ ರೈತ ಉರ್ದು ಮಾತಾಡುವ ತನ್ನಂತಹವನೇ ಒಬ್ಬ ರೈತನನ್ನು ಕೂರಿಸಿಕೊಂಡಿದ್ದರೆ ಕತೆ ಹೇಗಿರುತ್ತಿತ್ತು? ಇದನ್ನು ಯೋಚಿಸಿದರೆ, ಭಾಷೆಯಾಚೆಗಿನ ಬಲಾಬಲಗಳು ಹೊಳೆಯುತ್ತವೆ.

ಬಿಜಾಪುರದ ಬಸ್ ನಿಲ್ದಾಣದಲ್ಲಿ ಒಬ್ಬ ಬೀದಿ ಗಾಯಕನಿದ್ದಾನೆ. ಡೋಲು ಬಾರಿಸುತ್ತಾ ಸೂಫಿ ಸಂತರ ಮೇಲೆ ಅವನು ಖವಾಲಿ ಹಾಡುತ್ತಾನೆ. ಭಕ್ತಿ ತುಂಬಿದ ಹಾಡುಗಳ ನಡುವೆ,

ಖುಷಿಗಾಗಿ ಅವನು ಹಾಡಿದ ಹಾಡೊಂದು ಕುತೂಹಲಕರವಾಗಿತ್ತು. "ನನಗ ಕನಡಾ ಬರುವುದಿಲ್ಲ, ನಿಮಗೆ ಹಿಂದೀ ತಿಳಿಯೊದಿಲ್ಲ" ಎಂದು ಆ ಹಾಡು ಶುರುವಾಗುತ್ತದೆ. ಉಚ್ಚಾರದಲ್ಲಿ ಒಂದೇ ರೀತಿ ಇರುವ, ಆದರೆ ಬೇರೆಬೇರೆ ಅರ್ಥನೀಡುವ ಕನ್ನಡ ಮತ್ತು ಉರ್ದು ಪದಗಳನ್ನು ಆ ಹಾಡಿನಲ್ಲಿ ಜೋಡಿಸಲಾಗಿದೆ.ಹಲವು ಭಾಷೆ ಮಾತನಾಡುವ ಜನರು ಒಂದೇ ಕಡೆ ಬದುಕುವಾಗ, ಒಂದು ಭಾಷೆಯವರು ಆಡುವ ಮಾತು ಮತ್ತೊಂದು ಭಾಷಿಕರಿಗೆ ಬೇರೆ ಅರ್ಥಕೊಟ್ಟು, ಉಂಟಾಗುವ ತಮಾಶೆಯನ್ನು ಆ ಹಾಡು ಚಿತ್ರಿಸುತ್ತದೆ. ಬಿಜಾಪುರವು ಉರ್ದು ಹುಟ್ಟಿ ಬೆಳೆದ ಊರುಗಳಲ್ಲಿ ಒಂದು. ಜೊತೆಗೆ ಮರಾಠಿ ಕೂಡ ಇರುವ ಊರು. ಬಹುಭಾಷಿಕ ಸಂದರ್ಭಗಳಲ್ಲಿ ಭಾಷೆಯ ಬೇರೆತನದಿಂದ ಗೊಂದಲ ದ್ವೇಷ ಪುಟಿಯುವುದು ಸಾಮಾನ್ಯ. ಅಂಥ ಹೊತ್ತಲ್ಲಿ ದ್ವೇಷದ ಕಟುತ್ವವನ್ನು ಆದಷ್ಟು ತಗ್ಗಿಸಲು, ಬದುಕನ್ನು ಆದಷ್ಟೂ ಬದುಕುವಂತೆ ಸಹ್ಯವಾಗಿಸಲು, ಇಂಥ ತಮಾಶೆಗಳು ಹುಟ್ಟಿರಬೇಕು. ತನ್ನದಲ್ಲದ ಮತ್ತೊಂದನ್ನು ತಮಾಷೆಯಿಂದ ನೋಡುವ ಗುಣದಿಂದ ಮನುಷ್ಯರು ಮತ್ತಷ್ಟು ಆಪ್ತರಾಗುತ್ತಾರೆ, ಹತ್ತಿರ ಬರುತ್ತಾರೆ; ಎದುರಿಗಿರುವುದನ್ನು ತಮಾಶೆ ಮಾಡುತ್ತಲೆ ಕಲಿತು ಬಳಸತೊಡಗುತ್ತಾರೆ ಅನಿಸುತ್ತದೆ.

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ.

ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್, ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯವನ್ನು ನಮ್ಮಲ್ಲಿ ಹುಟ್ಟಿಸಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶೀ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶ ಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, ಅದನ್ನು ತನ್ನ ಪ್ರಸಾರಾಂಗದ ಮೂಲಕವೂ ಪೂರೈಸುತ್ತಲಿದೆ. ಈ ದಿಸೆಯಲ್ಲಿ ಬೆಳಕು ಕಂಡ ಒಂದು ಉತ್ತಮ ಕೃತಿಯಾಗಿದೆ 'ಬಹುಭಾಷಿಕ ಸಂಸ್ಕೃತಿ'.

ಡಾ. ರಹಮತ್ ತರೀಕೆರೆ ಅವರು 'ಬಹುಭಾಷಿಕ ಸಂಸ್ಕೃತಿ' ಕುರಿತು ಮಂಟಪ ಮಾಲೆ ಉಪನ್ಯಾಸವನ್ನು ನೀಡಿದ್ದಾರೆ. ಇದಕ್ಕಾಗಿ ಕನ್ನಡ ವಿಶ್ವವಿದ್ಯಾಲಯ ಅವರಿಗೆ ಕೃತಜ್ಞವಾಗಿದೆ.

ಡಾ. ಎಂ. ಎಂ. ಕಲಬುರ್ಗಿ
ಕುಲಪತಿಗಳು